# ವಿಷಯ ಸೂಚಿ

# ಸತ್ ದರ್ಶನ

ಮತ್ತು

# ಉಪದೇಶ ಸಾರ

## ಶ್ರೀ ರಮಣ ಮಹರ್ಷಿ

SAT DARSHANA AND UPADESHA SAARA
BY
RAMANA  MAHARSHI
JUNE 2020
Kannada bhaavaanuvaada
Radhakrishnan Garani
Editor

Contact;  rgarani@gmail.com
Mob:   91 7019049063

……

# ಸತ್ ದರ್ಶನ

## ಶ್ರೀ ರಮಣ ಮಹರ್ಷಿಗಳ
## “ಉಳ್ಳದು ನಾರ್ಪದು” ಕೃತಿ

### ಕಾವ್ಯ ಕಂಠ ಗಣಪತಿ ಮುನಿಗಳ
### ಸಂಸ್ಕೃತ ಅವತರಣಿಕೆ

ಕನ್ನಡದ ಭಾವಾನುವಾದ
ಗರಣಿ ರಾಧಾಕೃಷ್ಣನ್

(ಖಾಸಗಿ  ಹಂಚಿಕೆಗಾಗಿ ಸೀಮಿತ)

ಪೂಜ್ಯ ಗುರುಗಳಿಗೂ
ಆತ್ಮದ ಅನ್ವೇಶಕರೆಲ್ಲರಿಗೂ
ಸಮರ್ಪಿತ



ಬ್ರಹ್ಮಾನಂದಮ್ ಪರಮ ಸುಖದಮ್ ಕೇವಲಮ್ ಜ್ನಾನಮೂರ್ತಿಮ್
ದ್ವಂದ್ವಾತೀತಮ್ ತ್ರಿಗುಣ ರಹಿತಮ್  ಸದ್ಗುರುಮ್ ತ್ವಮ್ ನಮಾಮಿ
ब्रह्मान०दम् परम सुखदम् केवलम् ज्नानमूर्तिम्
द्व०द्वातीतम् त्रिगुण रहितम्  सद्गुरुम् त्वम् नमामि

# ಸತ್ ದರ್ಶನ

ಸತ್ ದರ್ಶನ, ರಮಣ ಮಹರ್ಷಿಗಳ ಅತ್ಯುನ್ನತ ಶ್ರೇಣಿಯ ನಲವತ್ತು ಪದ್ಯಗಳ ಮಣಿ ಮಾಲೆ. ಉಳ್ಳದು ನಾಲ್ಪದು ಎಂಬ ಅವರ ತಮಿಳು ಕೃತಿಯನ್ನು ಸಂಸ್ಕೃತಕ್ಕೆ ಭಾಷಾಂತರ ಮಾಡಿ ಅವರ ವಾಣಿಯನ್ನು ನಮಗೆ ಉಣಬಡಿಸಿದ ಮಹಾತ್ಮರು ಶ್ರೀ ಕಾವ್ಯಕಂಠ ಗಣಪತಿಮುನಿಗಳು. ಇವರು ಮಹರ್ಷಿಗಳ ನೆಚ್ಚಿನ ಶಿಷ್ಯರುಗಳಲ್ಲಿ ಒಬ್ಬರು. ಈ ಮಾಲೆಗೆ ಸತ್ ದರ್ಶನ ಎಂದು ನಾಮಕರಣ ಮಾಡಿದ್ದಾರೆ. ಇದನ್ನು ಷಟ್ ದರ್ಶನ ಎಂದು ತಪ್ಪು ಕಲ್ಪನೆ ಮಾಡಬಾರದು. (ಷತ್ ದರ್ಶನಗಳು…..ಪೂರ್ವ ಮೀಮಾಂಸೆ, ಉತ್ತರ ಮೀಮಾಂಸೆ,ಸಾಂಖ್ಯ, ನ್ಯಾಯ, ಯೋಗ ಮತ್ತು ವೈಶೇಶಿಕ)

ದರ್ಶನ ಎಂದರೆ ಅರಿವು ಎಂದು ತಿಳಿಯಬೇಕು. ಸಾಧಾರಣವಾಗಿ, ನಾವೆಲ್ಲರೂ ನಮ್ಮ ಪಂಚೇಂದ್ರಿಯಗಳ ಮೂಲಕ ಆಗು ಹೋಗುಗಳನ್ನು ತಿಳಿದುಕೊಂಡು ಒಳ್ಳೆಯದು ಮತ್ತು ಕೆಟ್ಟದ್ದು ಎಂದು ವಿಭಜನೆ ಮಾಡಿಕೊಳ್ಳುತ್ತೇವೆ. ಇದು ಮನಸ್ಸಿನ ಮೇಲ್ಮೆಯಲ್ಲಿ ತಿಳಿಯುವ ಪ್ರಕ್ರಿಯೆ. ಆದರೆ ಮನಸ್ಸಿನ ಅಂತರಾಳದಲ್ಲಿ ಮುಳುಗಿ ಸತ್ಯಾಸತ್ಯತೆಯನ್ನು ಕಂಡು ಕೊಂಡಾಗ ಮೇಲ್ನೋಟಕ್ಕೆ ಗೋಚರಿಸಿದ್ದು ಸರಿಯಲ್ಲ ಎಂದೆಣಿಸಿ ನಮ್ಮ ಚಿಂತನೆಯನ್ನು ಬಲವತ್ತರ ಗೊಳಿಸುತ್ತೇವೆ. ಆದ್ದರಿಂದ ಆಳವಾಗಿ ಅಧ್ಯಯನ ಮಾಡುವ ನಮ್ಮೆಲ್ಲರ ಪ್ರಕ್ರಿಯೆಗೆ .ದರ್ಶನಶಾಸ್ತ್ರ ಅಥವಾ ವೇದಾಂತ ದೃಷ್ಟಿ ಎನ್ನುತ್ತಾರೆ.

ಅಂತಃಕರಣದಲ್ಲಿನ ಬುದ್ಧಿಯಿಂದ ಮನದೊಳಗೆ ಇದನ್ನು ಗ್ರಹಿಸಿದ ಮೇಲೆ ಆತ್ಮಸಾಕ್ಷಾತ್ಕಾರದ ಕಡೆಗೆ ನಮ್ಮ ಚಿತ್ತವನ್ನು ಒಳ ತಿರುಗಿಸಿದಾಗ. ತೀವ್ರ ಮತ್ತು ದೀರ್ಘಕಾಲದ ಚಿಂತನೆಗೆ ಅವಕಾಶ

ದೊರೆಯುತ್ತದೆ. ಒದಗಿಬಂದ ಈ ಅವಕಾಶವನ್ನು ಬಲವತ್ತರ ಪಡಿಸಲು ಬೇರೆ ಬೇರೆ ಮಾರ್ಗಗಳನ್ನು ನಾವು ಉಪಯೋಗಿಸಿ ಕೊಳ್ಳಬೇಕಾಗುತ್ತದೆ.

ಇದಕ್ಕೆ ಅವಶ್ಯವಾಗಿ ಸಾಧನ ಷಟ್ ಸಂಪತ್ತಿಗಳನ್ನು ನಾವು ಅಭ್ಯಾಸ ಮಾಡಿ ನಂತರ ರಾಜ ಯೋಗದ ಮಾರ್ಗಗಳನ್ನು ಬಳಸಿದರೆ ಒಂದು ಹಂತವನ್ನು ತಲಪುತ್ತೇವೆ. ಎಲ್ಲ ಆಗು ಹೋಗುಗಳನ್ನು ಸಮಭಾವದಲ್ಲಿ ವಿಚಲತೆ ಇಲ್ಲದೆ ನೋಡುವ ಒಂದು ಮನೋಭಾವ ಬರುತ್ತದೆ. ಇದು ನಮ್ಮ ಆತ್ಮನ ನೈಜಸ್ವರೂಪವನ್ನು ಗುರುತಸಿ ಪಡೆದುಕೊಳ್ಳಲು ಸಹಕಾರಿ ಯಾಗುತ್ತದೆ. ಧರ್ಮದ ಚೌಕಟ್ಟಿನಲ್ಲಿ ನಾವು ನೆಲೆನಿಂತರೆ, ಮನಸ್ಸಿನ ಹೊಯ್ದಾಟ ಕಡಿಮೆಯಾಗಿ ಪಟು ಭಾವ ನಮಗೆ ಬರುತ್ತದೆ. ಇದರಿಂದ ಅಂತಃಕರಣದ ಶುದ್ದಿ ದೊರೆತು ಆತ್ಮಾಭ್ಯಾಸ ಬಹಳ ಸರಳವಾಗಿ ಸಾಗಿ ಆತ್ಮಜ್ಞಾನದ ಕಡೆಗೆ ತಿರುಗುತ್ತದೆ.

ರಮಣಮಹರ್ಷಿಗಳ ಬಗ್ಗೆ ಹೆಚ್ಚೇನೂ ಹೇಳಬೇಕಾದದ್ದು ಇಲ್ಲವೇ ಇಲ್ಲ. ಮುಮುಕ್ಷುಗಳಿಗೆ, ಇವರ ಮಹಿಮೆಯೇ ಅವರನ್ನು ಉತ್ತಮ ಸ್ಥಾನದಲ್ಲಿ ನೆಲೆಸುತ್ತದೆ. ಇಂತಹ ಸರಳವಾದ ವ್ಯಕ್ತಿ ಇದುವರೆಗೆ ನಾವು ಕಂಡಿಲ್ಲ ಕೇಳಿಯೂ ಇಲ್ಲ.

ತಮ್ಮ ಚಿಕ್ಕ ಚಿಕ್ಕ ಸಂದೇಶಗಳಲ್ಲಿ ಯಾವ ಶಾಸ್ತ್ರವನ್ನು ಅಥವಾ ವೇದಾಂತ ಸೂತ್ರವನ್ನೂ ಬಳಸದೆ ಉನ್ನತ ಮಟ್ಟಕ್ಕೆ ನಮ್ಮನ್ನು ಕರೆದೊಯ್ಯುತ್ತಾರೆ. ನಿನ್ನನ್ನು ನೀನು ಕಂಡುಕೋ ಎನ್ನುವುದೇ ಅವರ ಮೂಲ ಮಂತ್ರ. ನೀನು ಯಾರು ಎಂದು ಹುಡುಕಲು ಹೋದಾಗ, ಆ ನಿನ್ನ ರೂಪವೇ ಬಿದ್ದುಹೋಗಿ ಶುದ್ಧ ಆತ್ಮ ಸ್ವರೂಪ ಗೋಚರಿಸುತ್ತದೆ. ಅದೇ ಪರಮಪದ, ಪರಮ ಆನಂದ ಸ್ಥಿತಿ, ಅದೇ ಸ್ವರ್ಗ,ಅದೇ ಮೋಕ್ಷ.

ನೀನು ಯಾರು ಎಂದು ಹುಡುಕುವುದು ಹೇಗೆ? ಇದಕ್ಕೆ ಆವರ ಉತ್ತರ ಬಹಳ ಸರಳ. ನೀನು ಯಾವ ದಾರಿಯಿಂದ ಬಂದಿರುವೆಯೋ ಅದೇ ದಾರಿಯನ್ನು ಹಿಡಿದು ಹಿಂತಿರುಗಿ ಹೋಗು ಮತ್ತು ವಿಚಾರ ಮಾಡು. ಆತ್ಮನಿಂದ ಅಹಂ ಸ್ಫುರಣ ಬಂದಿದೆ. ಅದರಿಂದ ಅಹಂಕಾರ, ಚಿತ್ತ, ಬುದ್ಧಿ, ಮನಸ್ಸು, ಇಂದ್ರಿಯಗಳು ಮತ್ತು ದೇಹ ಬಂದಿದೆ. ಅದೇ ರೀತಿ, ದೇಹದಿಂದ ಆತ್ಮನಲ್ಲಿಗೆ 'ನೀನು ಯಾರು' ಎಂದು ವಿಚಾರಮಾಡಲು ಹೊರಟಾಗ, ನೀನು ಎಂಬುದೇ ಇಲ್ಲವಾಗಿ ಸತ್ಯದರ್ಶನ ವಾಗುತ್ತದೆ ಎಂಬುದೇ ಅವರ ಉಪದೇಶ. ಇದರಲ್ಲಿ ಇರುವ ಅಡೆ ತಡೆಗಳು, ತಪ್ಪು ತಿಳುವಳಿಕೆಗಳನ್ನು ಬಿಚ್ಚಿ ತೋರಿಸುವುದೇ ಮಹರ್ಷಿಗಳ ನಲವತ್ತು ಪದ್ಯಗಳ ಮಣಿ ಮಾಲೆ. ಈ ಪದ್ಯಗಳ ದೀರ್ಘ ಚಿಂತನೆಯಲ್ಲಿ ಮುಳುಗಿ ನಮ್ಮ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳೋಣ.

ಸರಳವಾಗಿ ನನಗೆ ತೋಚಿದ ರೀತಿ, ಈ ಪದ್ಯಗಳ ತರ್ಜುಮೆ ಯನ್ನು ನಿಮ್ಮ ಮುಂದೆ ಮಂಡಿಸಲು ರಮಣ ಮಹರ್ಷಿಗಳ ಆಶೀರ್ವಾದಗಳನ್ನು ಬೇಡಿ ನಾಲ್ಕೈದು ಸಾಲುಗಳನ್ನು ಬರೆದಿದ್ದೇನೆ.

ಈ ಕೃತಿಯು ನನ್ನ ಆತ್ಮೀಯ ಸ್ನೇಹಿತರೊಬ್ಬರ ಪ್ರೇರೇಪಣೆ ಮತ್ತು ಉತ್ತೇಜನದಿಂದ ಹೊರಬಂದಿದೆ. ನಾನು ಅವರಿಗೆ ಆಭಾರಿಯಾಗಿದ್ದೇನೆ.

ತಪ್ಪು ಒಪ್ಪುಗಳಿಗೆಲ್ಲಾ ನಾನೇ ಹೊಣೆ ಎಂದು ನಿಮ್ಮಲ್ಲಿ ವಿನಯ ಪೂರ್ವಕ ತಿಳಿಸ ಬಯಸುತ್ತೇನೆ.

ಬಹಳ ಅರ್ಥ ಗರ್ಭಿತವಾದ ಈ ನಲವತ್ತು ಪದ್ಯಗಳು,ನಲವತ್ತು ಸೂತ್ರಗಳು ಚಿಕ್ಕದಾಗಿ ಚೊಕ್ಕದಾಗಿ ಇಡಲಾಗಿದೆ. ಒಂದೊಂದು ಸೂತ್ರದಲ್ಲಿಯೂ ಬಹಳ ಉನ್ನತವಾದ ಮತ್ತು ಗಹನವಾದ ಅರ್ಥವು ಅಡಗಿದೆ. ಯಾವುದೇ ರೀತಿ ಅರ್ಥವನ್ನು ಕಲ್ಪಿಸಿದರೂ ಮತ್ತೆ ಮತ್ತೆ ಮನನ ಮಾಡಿದಾಗ ಹೊಸ ಹೊಸ ಅರ್ಥ ಹೊಳೆಯುತ್ತದೆ.

ಆದ್ದರಿಂದ, ಶ್ರಿಮಾನ್ ಡಿ. ವಿ. ಜಿ. ಅವರು ತಮ್ಮ ಕಗ್ಗದ ಪೀಠಿಕೆಯಲ್ಲಿ ಬರೆದಂತೆ, ಒಂದು ಸಕ್ಕರೆ ಬತ್ತಾಸನ್ನು ಬಾಯಲ್ಲಿ ಇಟ್ಟುಕೊಂಡು, ಅದರ ರಸದ ಆಸ್ವಾದನೆ ಹೇಗೆ ಮಾಡುತ್ತೇವೆಯೋ, ಅದೇ ರೀತಿ ಈ ಸೂತ್ರಗಳ ಆಳವಾದ ಸಂದೇಶವನ್ನು ಮತ್ತು ಅದರಲ್ಲಿನ ರಸವನ್ನು, ವಿಚಾರದಿಂದ ಸಾರ್ಥಕಗೊಳಿಸಿಕೊಳ್ಳಬೇಕು
ಈ ಮಣಿಮಾಲೆಯಲ್ಲಿನ ನಲವತ್ತು ನಾಲ್ಕು ಪದ್ಯಗಳಲ್ಲಿ, ಮೊದಲಿನ ಎರಡು ಪದ್ಯಗಳು ಪ್ರಾರ್ಥನಾ ರೂಪದಲ್ಲಿ ಇಡಲಾಗಿದೆ. ಕೊನೆಯ ಎರಡು ಪದ್ಯ, ರಮಣ ಮಹರ್ಷಿಗಳ ಪಾದಕ್ಕೆ ನಮಸ್ಕಾರ ರೂಪದಲ್ಲಿ ಇಡಲಾಗಿದೆ. ಈ ಪದ್ಯಗಳನ್ನು ಅರ್ಥೈಸಿಕೊಂಡು ನಿಧಿಧ್ಯಾಸಕ್ಕೆ ಉಪಯೊಗ ಮಾಡಿಕೊಳ್ಳಬೇಕು.. ಇದರಲ್ಲಿನ ಆಳವಾದ ತತ್ವ ಗ್ರಹಿಸಲು ತಾಳ್ಮೆ ಮತ್ತು ಗಂಭೀರ ಚಿಂತನೆ ಅತ್ಯಗತ್ಯ.

ಅಹಂಕಾರವನ್ನುತೊಡೆದು ಹಾಕಲು ಮತ್ತು ನಾಶಮಾಡಲು ಆತ್ಮ ವಿಚಾರವೇ ಅತ್ಯಂತ ಉತ್ತಮವಾದ ದಾರಿಯೇ ಹೊರತು ಬೇರೆ ಮಾರ್ಗವೇ ಇಲ್ಲ ಎನ್ನುವುದೇ ಶ್ರೀ ರಮಣ ಮಹರ್ಷಿಗಳ ವಾಣಿ. ಅಹಂಕಾರವು,ತಾನೇ ಆತ್ಮವೆಂಬ ತಪ್ಪು ತಿಳುವಳಿಕೆಯು ನಮ್ಮನ್ನು ಭೂತದಂತೆ ಕಾಡುತ್ತದೆ. ಯಾವಾಗ ಈ ಅಹಂ ವೃತ್ತಿಯ ಮೂಲವನ್ನು ಹುಡುಕುತ್ತೇವೆಯೊ, ಆಗ ಈ ಆಭಾಸವು ಮಾಯವಾಗಿ ಸತ್ ಸ್ವರೂಪ ಗೊಚರಿಸುತ್ತದೆ.

सत्प्रत्ययाः किं नु विहाय सन्तं  हृद्येष चिन्ता रहितो हृदाख्यः।
कथं स्मरामस्तममेयमेकं  तस्य स्मृतिस्तत्र दृढैव निष्ठा ॥ १ ॥
ಸತ್ಪ್ರತ್ಯಯಾಃ ಕಿಂ ನು ವಿಹಾಯ ಸನ್ತಂ
ಹೃದ್ಯೇಷ ಚಿನ್ತಾ ರಹಿತೋ ಹೃದಾಖ್ಯಃ|
ಕಥಂ ಸ್ಮರಾಮಸ್ತಮಮೇಯಮೇಕಂ
ತಸ್ಯ ಸ್ಮೃತಿಸ್ತತ್ರ ದೃಢೈವ ನಿಷ್ಠಾ || ೧ ||

ಯಾವ ಬದಲಾವಣೆಯನ್ನು ಹೊಂದದಂತಹ ಒಂದು ಸತ್ಯ ನಿಮ್ಮೊಳಗೆ ಸ್ಫುರಣ ಮಾಡುತ್ತಿರುವಾಗ, ನಾನು ಈ ದೇಹದ ಯಜಮಾನ ಎಂಬ ಭಾವನೆ ನಿಮಗೆ ಹೇಗೆ ಬಂದೀತು.  ಮನಸ್ಸಿನಿಂದ ಅಳೆಯ ಲಾಗದ ಮತ್ತು ಹಿಡಿಯಲಾಗದ ಈ ನಿಜ ಸ್ವರೂಪವನ್ನು ಯಾವ ರೀತಿ ಗುರುತಿಸುವುದು?   ಈ ರೀತಿಯಾಗಿ ಸದಾ ನಿಮ್ಮಲ್ಲಿ ನೆಲೆಸಿರುವವನ ಮನನ  ಯಾವಾಗಲೂ ಮಾಡುತ್ತಿದ್ದರೆ  ನಿಮ್ಮ ಸ್ವರೂಪದಲ್ಲಿ ನೆಲೆ ನಿಲ್ಲಬಲ್ಲಿರಿ.

मृत्युञ्जयं मृत्युभियाश्रिताना  महंमतिर्मृत्युमुपैति पूर्वम्।
अथ स्वभावादमृतेषु तेषु  कथं पुनर्मृत्युधियोऽवकाशः ॥ २ ॥
ಮೃತ್ಯುಞ್ಜಯಂ ಮೃತ್ಯುಭಿಯಾಶ್ರಿತಾನಾ -
ಮಹಂಮತಿರ್ಮೃತ್ಯುಮುಪೈತಿ ಪೂರ್ವಮ್|
ಅಥ ಸ್ವಭಾವಾದಮೃತೇಷು ತೇಷು
ಕಥಂ ಪುನರ್ಮೃತ್ಯುಧಿಯೋಽವಕಾಶಃ  ॥ २ ॥

ಮರಣ ಭಯ ಇರುವವರು ದೇವರು ಎಂಬ ವಸ್ತುವನ್ನು ಸೃಷ್ಟಿ ಮಾಡಿ ಅವನಲ್ಲೇ ಶರಣಾಗುತ್ತಾರೆ. ಆದರೆ ಈ ದೇವರು ಎಂಬುವನು ಹುಟ್ಟು ಸಾವುಗಳ ಆಚೆ ಇರುವುದರಿಂದ, ಅಹಂಕಾರವು ಅಳಿಯಲಾಗಿ ದೇಹದ ಮರಣವು ಒದಗುತ್ತದೆ.   ಈ ನಂಬಿಕಯೇ ಇದಕ್ಕೆ ಕಾರಣ.   ಬಹಳಷ್ಟು

ಬದಲಾವಣೆಗಳು ಮನುಷ್ಯನ ಹುಟ್ಟಿನಿಂದ ಅವನ ಅಂತ್ಯದ ವರೆಗೆ ಆಗುತ್ತಲೇ ಇರುತ್ತದೆ. ಆದರೆ,ನಮ್ಮ ನಿಜ ಸ್ಥಿತಿ ಇದರ ಆಚೆ ಇರುವುದು ಎಂಬ ದೃಢ ವಿಶ್ವಾಸ ನಮಗೆ ದೊರೆತಾಗ ಮರಣದ ಭಯ ಮತ್ತು ಯೋಚನೆ ಏಕೆ ಬರುತ್ತದೆ?

सर्वैर्निदानं जगतोऽहमश्च     वाच्यः प्रभुः कश्चिदपारशक्तिः ।
चित्रेऽत्र लोक्यं च विलोकितपटः प्रकाशोऽप्यभवत्स एकः ॥
ಸರ್ವೈರ್ನಿದಾನಂ ಜಗತೋಽಹಮಶ್ಚ
ವಾಚ್ಯಃ ಪ್ರಭುಃ ಕಶ್ಚಿದಪಾರಶಕ್ತಿಃ |
ಚಿತ್ರೇಽತ್ರ ಲೋಕ್ಯಂ ಚ ವಿಲೋಕಿತಾ ಚ
ಪಟಃ ಪ್ರಕಾಶೋಽಪ್ಯಭವತ್ಸ ಏಕಃ ||೧ ||

ಈ ಪ್ರಪಂಚವು ಉದಯಿಸಲು ಮತ್ತು ನಾನು ನಾನು ಎಂಬ ಅನಿಸಿಕೆಗಳು ಎಲ್ಲವೂ ಆ ಸರ್ವೇಶ್ವರನ ಶಕ್ತಿ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳಬೇಕು.  ಆದ್ದರಿಂದ, ಈ ಜಗತ್ತಿನಲ್ಲಿ ತೊರುವ ಮತ್ತು ತೋರಿಕೆಯ ಹಿಂದೆ ಅಡಗಿರುವ. ಮೂಲ ರೂಪವು ಆ ಸತ್ಯದ ದರ್ಶನದಿಂದ ಉಂಟಾಗಿದೆಯೆಂದು  ತಿಳಿಯಬೇಕು.

आरभ्यते जीवजगत्परात्म   तत्त्वाभिधानेन मतं समस्तम् ।
इदं त्रयं यावदहंमति स्यात्  सर्वोत्तमाऽहंमतिशून्यनिष्ठा ॥ २ ॥
ಆರಭ್ಯತೇ ಜೀವಜಗತ್ಪರಾತ್ಮ -
ತತ್ತ್ವಾಭಿಧಾನೇನ ಮತಂ ಸಮಸ್ತಮ್ |
ಇದಂ ತ್ರಯಂ ಯಾವದಹಂಮತಿ ಸ್ಯಾತ್
ಸರ್ವೋತ್ತಮಾಽಹಂಮತಿಶೂನ್ಯನಿಷ್ಠಾ || ೨ ||

ಎಲ್ಲ ಪಂಥಗಳ ಮತ್ತು ಮತೀಯರ ಅನಿಸಿಕೆ, ವಾದ ಏನೆಂದರೆ, ಜೀವ ಜಗತ್ತು ಈಶ್ವರ ಎಂಬ ಮೂರು ವಿಭಾಗಗಳಿಂದ ಈ ಪ್ರಪಂಚ ಉಂಟಾಗಿದೆ ಎಂಬ ಬಲವತ್ತರವಾದ ಭಾವನೆ.
ಆದರೆ, ನಾನು ನಾನು ಎಂಬ ಭಾವನೆ ಇರುವ ವರೆಗೂ ಈ ಮೂರು ಅಂಶಗಳು ಇದ್ದೇ ಇರುತ್ತದೆ. ಇದೆಲ್ಲವೂ ಮನಸ್ಸಿನ ಅಲೋಚನೆಗಳೇ ಹೊರತು ನಿಜವಲ್ಲ. ಮನಸ್ಸು ಬುದ್ಧಿ ಅಹಂಕಾರ ಇರುವವರೆಗೆ ಈ ಜಗತ್ತು ತೋರುತ್ತಿರುತ್ತದೆ. ಮನಸ್ಸು ಎಂಬ ವಸ್ತುವೇ ಇಲ್ಲದಿರುವಾಗ, ಈ ಆಲೋಚನೆ, ಹೇಗೆ ತಾನೇ ಸಾಧ್ಯ. ಆದ್ದರಿಂದ, ಈ ಸಂಶಯ ಪರಿಹಾರವೇ ನಮ್ಮ ಮೂಲ ಅಹಂಕಾರವನ್ನು ತೊಡೆದುಹಾಕಲು ಕಾರಣ ವಾಗಬೇಕು.

सत्यं मृषा वा चिदिदं जडं वा दुःखं सुखं वेति मुधा विवादः।
अदृष्टलोका निरहंप्रतीति र्निष्ठाऽविकल्पा परमाऽखिलेष्टा ॥ ३ ॥

ಸತ್ಯಂ ಮೃಷಾ ವಾ ಚಿದಿದಂ ಜಡಂ ವಾ
ದುಃಖಂ ಸುಖಂ ವೇತಿ ಮುಧಾ ವಿವಾದಃ|
ಅದೃಷ್ಟಲೋಕಾ ನಿರಹಂಪ್ರತೀತಿ -
ರ್ನಿಷ್ಠಾಽವಿಕಲ್ಪಾ ಪರಮಾಽಖಿಲೇಷ್ಟಾ || ೩ ||

ಈ ಜಗತ್ತು ಇದೆಯೋ ಇಲ್ಲವೋ, ನಿಜವೋ ಸುಳ್ಳೋ, ಇಂದ್ರಿಯ ವ್ಯಾಪಾರಗಳು ಸತ್ಯವೋ ಮಿಥ್ಯವೋ, ಸುಖ ದುಃಖಗಳು ಶಾಶ್ವತವೋ ಇಲ್ಲವೋ, ಎಂದು ವಿಚಾರ ಮಾಡುವುದರಲ್ಲಿ ಏನೂ ಪ್ರಯೋಜನವಿಲ್ಲ. ಮತ್ತು ಅರ್ಥವೂ ಇಲ್ಲ. ಇವೆಲ್ಲಾ ಶುಷ್ಕ (ಅರ್ಥ ಶೂನ್ಯ) ವಾದವಷ್ಟೇ. ಯಾವ ಒಂದು ನಿಲುವಿನಲ್ಲಿ ನಿಂತಾಗ ಈ ಪ್ರಪಂಚವು ಕಾಣುವುದಿಲ್ಲವೋ, ಎಲ್ಲ ಅಹಂಕಾರಗಳು ನಾಶವಾಗುವುವೋ ಎಲ್ಲಿ ಆಲೋಚನೆಗಳ ತರಂಗಗಳು ಇರುವುದಿಲ್ಲವೋ ಆ ಸ್ಥಿತಿಯೇ ಬಹಳ ಆನಂದಾದಾಯಕವಾದ ಮತ್ತು ಸುಖಕರವಾದ ನೆಲೆ.

सरूपबुद्धिर्जगतीश्वरे च   सरूपधीरात्मनि यावदस्ति।
अरूप आत्मा यदि कः प्रपश्येत्   सा दृष्टिरेकाऽनवधिर्हि पूर्णा
॥ ४

ಸರೂಪಬುದ್ಧಿರ್ಜಗತೀಶ್ವರೇ ಚ
ಸರೂಪಧೀರಾತ್ಮನಿ ಯಾವದಸ್ತಿ|
ಅರೂಪ ಆತ್ಮಾ ಯದಿ ಕಃ ಪ್ರಪಶ್ಯೇತ್
ಸಾ ದೃಷ್ಟಿರೇಕಾಽನವಧಿರ್ಹಿ ಪೂರ್ಣಾ || ೪ ||

ತನ್ನ ಇರುವಿಕೆಗೆ, ಎಲ್ಲಿಯವರೆಗೆ ನಾನು ನನ್ನದು ನಾಮ ರೂಪಗಳು ಇದೆ ಎಂದು ನಂಬುತ್ತಾರೋ ಅಲ್ಲಿಯವರೆಗೆ. ಅವನಿಗೆ ಪ್ರಪಂಚ ಮತ್ತು ದೇವರುಗಳು,ಆ ರೂಪಗಳಿಂದ ಕೂಡಿರುತ್ತದೆ. ಒಂದುವೇಳೆ ಆತ್ಮನಿಗೆ ರೂಪ ಇಲ್ಲ ಮತ್ತು ನಾನು ಇಲ್ಲ ಎಂದು ತಿಳಿದರೆ ಯಾವ ದೇವರು ಮತ್ತು ಪ್ರಪಂಚ ಕಾಣುತ್ತದೆ. ಆದ್ದರಿಂದ ಪರಿಮಿತಿಯೇ ಇಲ್ಲದ ವಸ್ತುವು ,ಸತ್ಯ ಒಂದೇ ಮತ್ತು ಎಂದೆಂದಿಗೂ ನಿತ್ಯ ಎಂದು ತಿಳಿಯುವುದೇ ಬುದ್ಧಿವಂತಿಕೆ.

यत्पञ्चकोशात्मकमस्ति देहं तदन्तरा किं भुवनं चकास्ति ।
देहं विना पञ्चविधं तदेतत् पश्यन्ति के वा भुवनं भणन्तु ॥ ५
॥

ಯತ್ಪಞ್ಚಕೋಶಾತ್ಮಕಮಸ್ತಿ ದೇಹಂ
ತದನ್ತರಾ ಕಿಂ ಭುವನಂ ಚಕಾಸ್ತಿ |
ದೇಹಂ ವಿನಾ ಪಞ್ಚವಿಧಂ ತದೇತತ್
ಪಶ್ಯನ್ತಿ ಕೇ ವಾ ಭುವನಂ ಭಣನ್ತು || ೫ ||

ದೇವರಿಗೆ ರೂಪ ಇರುವುದರಿಂದಲೇ ತಾನೇ ಎಲ್ಲವನ್ನೂ ನೋಡಬಲ್ಲ ಮತ್ತು ತಿಳಿಯಬಲ್ಲ ಎಂಬ ಸಂಕುಚಿತ ಭಾವನೆಯಿಂದಲೇ ಎಲ್ಲರಿಗೂ ಈ ಆಭಾಸಗಳು ಉಂಟಾಗುತ್ತಿರುತ್ತದೆ. ನಮ್ಮ ಪಂಚಕೋಶಗಳನ್ನು ನಿಯಂತ್ರಣ ಮಾಡುವ ಒಬ್ಬ ವ್ಯಕ್ತಿ ಅವುಗಳ ಹಿಂದೆ ಇದ್ದಾನೆ ಎಂಬ ತಿಳುವಳಿಕ ಇಲ್ಲದಿದ್ದರೆ, ಈ ಕೋಶಗಳು ತನ್ನನ್ನು ತಾನೇ ಹೇಗೆ

ತಿಳಿದುಕೊಳ್ಳಲು ಆಗುತ್ತದೆ. ನಿಯಾಮಕನಿಲ್ಲದ ದೇಹ ಮತ್ತು ಪಂಚಕೋಶಗಳನ್ನು ಒಳಗೊಂಡ ಯಾರಾದರೂ ಇದ್ದು ಈ ಪ್ರಪಂಚವನ್ನು ನಾನು ನೋಡಿದ್ದೇನೆ ಎಂದಾಗ, ಅಂತಹವರನ್ನು ನನ್ನಲ್ಲಿಗೆ ಕರೆತನ್ನಿ ನೋಡೋಣ.

शब्दादिरूपं भुवनं समस्तं शब्दादिसत्तेन्द्रियवृत्तिभास्या।
सत्तेन्द्रियाणां मनसो वशे स्यात मनोमयं तद्भुवनं वदामः ॥ ६ ॥

ಶಬ್ದಾದಿರೂಪಂ ಭುವನಂ ಸಮಸ್ತಂ
ಶಬ್ದಾದಿಸತ್ತೇನ್ದ್ರಿಯವೃತ್ತಿಭಾಸ್ಯಾ|
ಸತ್ತೇನ್ದ್ರಿಯಾಣಾಂ ಮನಸೋ ವಶೇ ಸ್ಯಾತ್
ಮನೋಮಯಂ ತದ್ಭುವನಂ ವದಾಮಃ || ೬ ||

ಈ ಜಗತ್ತು, ನಮ್ಮ ಇಂದ್ರಿಯ ಸಮೂಹಗಳಾದ ಶಬ್ದ ಸ್ಪರ್ಷ ರೂಪ ರಸ ಮತ್ತು ಗಂಧಗಳಿಂದ ಉಂಟಾಗಿದೆಯಲ್ಲವೇ. ಇದರಿಂದ ಉತ್ಪತ್ತಿಯಾದ ತರಂಗಗಳು, ಆಲೋಚನೆಯ ಮಾರ್ಗಗಳಲ್ಲವೇ. ಈ ಇಂದ್ರಿಯ ಸಮೂಹಗಳು ಮತ್ತು ಅದರಿಂದ ಉಂಟಾದ ತರಂಗಗಳು ಮನಸ್ಸಿನ ಹಿಡಿತದಲ್ಲಿ ಇದೆಯಲ್ಲವೆ. ಆದ್ದರಿಂದ ಈ ಪ್ರಪಂಚವು, ಗೋಚರವಾದ ಬರಿಯ ಮನಸ್ಸಿನ ಸ್ಥಿತಿಯೇ ಎಂದು ಹೇಳಬಹುದಲ್ಲವೇ.

धिया सहोदेति धियास्तमेति लोकस्ततो धीप्रविभास्य एषः ।
धीलोकजन्मक्षयधाम पूर्णं सद्वस्तु जन्मक्षयशून्यमेकम् ॥ ७ ॥

ಧಿಯಾ ಸಹೋದೇತಿ ಧಿಯಾಸ್ತಮೇತಿ
ಲೋಕಸ್ತತೋ ಧೀಪ್ರವಿಭಾಸ್ಯ ಏಷಃ |
ಧೀಲೋಕಜನ್ಮಕ್ಷಯಧಾಮ ಪೂರ್ಣಂ
ಸದ್ವಸ್ತು ಜನ್ಮಕ್ಷಯಶೂನ್ಯಮೇಕಮ್ || ೭ ||

ಈ ಜಗತ್ತು ನಮ್ಮ ಅಂತಃಕರಣದಲ್ಲಿ ಉದಯವಾಗಿ ಮತ್ತು ಅದರಲ್ಲೇ ಲೀನವಾಗುವುದರಿಂದ ಈ ಅಂತಃಕರಣದಲ್ಲಿನ ತೋರಿಕೆಯೇ (ಅಭಿವ್ಯಕ್ತವಾಗುವುದು) ಈ ಜಗತ್ತು. ಆದ್ದರಿಂದ ನಮ್ಮ ಅಂತಃಕರಣದಲ್ಲಿನ ಅಥವಾ ಅಂತಃಕರಣವೇ ಈ ಜಗತ್ತು ಉದಯಿಸಲು ಮತ್ತು ನಾಶವಾಗಲು ಕಾರಣವಲ್ಲವೇ. ನಮ್ಮ ಶುದ್ಧ ಬುದ್ಧ ಮುಕ್ತ ಸ್ವರೂಪ ಅಂತಃಕರಣದ ಆಚೆ ಇರುವುದರಿಂದ ಎಲ್ಲೆಲ್ಲೂ ತೋರಿ ಉದಯವಾಗಿ, ಆದಿ ಅಂತ್ಯಗಳು ಇಲ್ಲದ ಅದು ತಾನೇ ತಾನಾಗಿದೆಯೇ ಹೊರತು ಮತ್ತೇನೂ ಆಗಲು ಸಾದ್ಯವಿಲ್ಲ.

भवन्तु सद्दर्शनसाधनानि परस्य नामाकृतिभिः सपर्याः।
सद्वस्तुनि प्राप्ततदात्मभावा निष्ठैव सद्दर्शनमित्यवेहि॥ ८ ॥

ಭವನ್ತು ಸದ್ದರ್ಶನಸಾಧನಾನಿ
ಪರಸ್ಯ ನಾಮಾಕೃತಿಭಿಃ ಸಪರ್ಯಾಃ|
ಸದ್ವಸ್ತುನಿ ಪ್ರಾಪ್ತತದಾತ್ಮಭಾವಾ
ನಿಷ್ಠೈವ ಸದ್ದರ್ಶನಮಿತ್ಯವೇಹಿ ॥ ೮ ॥

ಒಂದು ವೇಳೆ, ನಾವು ಮಾಡುವ ವಿಧಿ ವಿಧಾನಗಳಿಂದ ಕೂಡಿದ ಪೂಜೆ ಪುನಸ್ಕಾರ ಮತ್ತು ಇತರ ಸೇವೆಗಳು ಮತ್ತು ನಾವು ಆ ದೇವರಿಗೆ ಕೊಡುವ ರೂಪ,ನಾಮಗಳು, ಎಲ್ಲವೂ ಆತ್ಮನನ್ನು ಹೊಂದಲು ನಾವು ಮಾಡುತ್ತಿರುವ ಅಲ್ಪತಮವಾದ ಸಾಧನಗಳು ಎಂಬುದನ್ನು ಒಪ್ಪಿಕೊಂಡರೂ, ಆ ಆತ್ಮನನ್ನು ಪಡೆಯಬಹುದಾದ ಮತ್ತು ತಿಳಿಯಲು ಸಾಧ್ಯವಾಗ ಬಹುದಾದ ಒಂದು ದಾರಿಯೇ ಎಂಬುದು ಖಚಿತವಾಯಿತಲ್ಲವೇ? ಅಂದರೆ ನಾವು ತದೇಕಚಿತ್ತಾರಾಗಿ ಅಂತರ್ಮುಖರಾಗಿ ಮೂಲ ಸ್ವರೂಪದತ್ತ ನಮ್ಮ ಚಿತ್ತವನ್ನು ತಿರಿಗಿಸಿದಂತೆ ಆಯಿತು.

द्वन्द्वानि सर्वाण्यखिलास्त्रिपुट्यः किञ्चित्समाश्रित्य विभान्ति वस्तु।
तन्मार्गणे स्याद्गलितं समस्तं न पश्यतां सच्चलनं कदापि ॥ ९ ॥

ದ್ವನ್ದ್ವಾನಿ ಸರ್ವಾಣ್ಯಖಿಲಾಸ್ತ್ರಿಪುಟ್ಯಃ
ಕಿಞ್ಚಿತ್ಸಮಾಶ್ರಿತ್ಯ ವಿಭಾನ್ತಿ ವಸ್ತು|
ತನ್ಮಾರ್ಗಣೇ ಸ್ಯಾದ್ಗಲಿತಂ ಸಮಸ್ತಂ
ನ ಪಶ್ಯತಾಂ ಸಚ್ಚಲನಂ ಕದಾಪಿ || ೯ ||

ವಿರೋಧ ಪದಗಳಾದ ಉಷ್ಣ ಮತ್ತು ಶೀತ,, ಸುಖ ಮತ್ತು ದುಃಖ, ಆಸೆ ಮತ್ತು ನಿರಾಸೆ, ಅನುಭವಿಸುವವ ಮತ್ತು ಅನುಭವಿಸಲ್ಪಡುವವ ಮತ್ತು ಅದರಿಂದ ಉಂಟಾದ ಅನುಭವ ಇವೆಲ್ಲವೂ ಒಂದು ಉನ್ನತವಾದ ಶಕ್ತಿ ಮತ್ತು ಅದರ ಅಧಾರದಿಂದಲೇ ತೋರುತ್ತದೆ ಎಂದು ಖಚಿತವಾಯಿತಲ್ಲವೇ. ಆ ಶಕ್ತಿಯನ್ನು ನಾವು ಹುಡುಕತೊಡಗಿದರೆ ಈ ದ್ವಂದಗಳೆಲ್ಲವೂ ನಾಶವಾಗಿ,ಬ್ರಹ್ಮ ವಿಷ್ಣು ಮಹೇಶ್ವರ ಎಂಬ ಮೂರು ರೂಪಗಳು ಮರೆಯಾಗಿ ಬಿಡುತ್ತವೆ. ಯಾರು ಈ ಮೂಲಸ್ವರೂಪದಲ್ಲಿಯೇ ನೆಲೆ ನಿಂತಿರುತ್ತಾರೋ ಅಂತಹವರ ಮನಸ್ಸಿನಲ್ಲಿ ಅಲುಗಾಟ, ತೊಳಲಾಟಗಳು ಇರವುದೇ ಇಲ್ಲ.

विद्या कथं भाति न चेदविद्या विद्यांविना किं प्रविभात्यविद्या।
द्वयं च कस्येति विचार्य मूल स्वरूपनिष्ठा परमार्थविद्या ॥ १० ॥

ವಿದ್ಯಾ ಕಥಂ ಭಾತಿ ನ ಚೇದವಿದ್ಯಾ
ವಿದ್ಯಾಂ ವಿನಾ ಕಿಂ ಪ್ರವಿಭಾತ್ಯವಿದ್ಯಾ|
ದ್ವಯಂ ಚ ಕಸ್ಯೇತಿ ವಿಚಾರ್ಯ ಮೂಲ -
ಸ್ವರೂಪನಿಷ್ಠಾ ಪರಮಾರ್ಥವಿದ್ಯಾ || ೧೦ ||

ಆ ಮೂಢ ಮನಸ್ಸು ಇರುವುದರಿಂದಲೇ ಅಲ್ಲವೇ ಅವಿದ್ಯೆ ಅಥವಾ ಆಜ್ಞಾನ ತೋರಿಕೊಳ್ಳಬಲ್ಲದು? ಜ್ಞಾನದ ದೀವಿಗೆ ಇಲ್ಲದಿದ್ದರೆ ಅವಿದ್ಯೆಯ ಬಗ್ಗೆ ತಿಳಿಯಲು ಅಗುತ್ತಿತ್ತೋ ಇಲ್ಲವೋ? ಈ ದ್ವಂದ್ವಗಳಾದ ಜ್ಞಾನ ಮತ್ತು ಅಜ್ಞಾನದ ಬಗ್ಗೆ ಕೂಲಂಕಶವಾಗಿ ಪರಿಶೀಲಿಸುವ ಒಂದು ಶಕ್ತಿಯೇ ನಿಜವಾದ ಜ್ಞಾನ. ತನ್ನ ಮೂಲ ಸ್ವರೂಪದಲ್ಲಿಯೇ ಮುಳುಗಿ ಅದರಲ್ಲೇ ನೆಲೆ ನಿಂತಾಗ ಗೋಚರವಾಗುವುದೇ ನಮ್ಮ ಶುದ್ದ ಜ್ಞಾನ ಮತ್ತು ಅರಿವು. ಯಾರು ತನ್ನ ಮೂಲ ಸ್ವರೂಪದಲ್ಲಿ ತನ್ನನ್ನು ತಾನು ಕಂಡುಕೊಂಡು ಅದನ್ನು ಸ್ಪಸ್ಟವಾಗಿ ತಿಳಿದು ಕೊಳ್ಳಬಲ್ಲನೋ ಅದೇ ಅವನ ನಿಜವಾದ ಸ್ಥಿತಿ ಮತ್ತು ಇರುವಿಕೆ.

बोद्धारमात्मानमजानतो यो बोधः स किं स्यात्परमार्थबोधः|
बोधस्य बोध्यस्य च संश्रयं स्वं विजानतस्तद्द्वितयं
विनश्येत् ॥ ११ ॥
ಬೋದ್ಧಾರಮಾತ್ಮಾನಮಜಾನತೋ ಯೋ
ಬೋಧಃ ಸ ಕಿಂ ಸ್ಯಾತ್ಪರಮಾರ್ಥಬೋಧಃ|
ಬೋಧಸ್ಯ ಬೋಧ್ಯಸ್ಯ ಚ ಸಂಶ್ರಯಂ ಸ್ವಂ
ವಿಜಾನತಸ್ತದ್ದ್ವಿತಯಂ ವಿನಶ್ಯೇತ್ || ೧೧ ||

ಬಾಹ್ಯ ಸಂಬಂಧಗಳಿಂದ ಕಂಡುಂಕೊಂಡ ಜ್ಞಾನ ಎಂದಾದರೂ ತನ್ನ ನಿಜ ಸ್ವರೂಪವನ್ನು ತಿಳಿಯಲು ಸಹಕಾರಿಯಾಗುತ್ತದೆಯೇ ಮತ್ತು ಅದು ಶುದ್ಧ ಆತ್ಮಜ್ಞಾನವಾಗಬಲ್ಲದೇ. ತಿಳಿದಿದ್ದು ಮತ್ತು ತಿಳಿಯಬೇಕಾದ ಕ್ರಿಯೆ ಎರಡಕ್ಕೂ ಆಧಾರವಾದುದೇ ಆತ್ಮ ಎಂದು ಕಂಡು ಕೊಂಡ ಕೂಡಲೇ ಅದೃಶ್ಯವಾಗಿ ನಾಶವಾಗಿಬಿಡುತ್ತದೆ.
ತಾನು ಯಾರು ಎಂಬ ಮಹತ್ತರವಾದ ವಿಚಾರವನ್ನು ತಿಳಿಯದವ ಎಷ್ಟೇ ವಿದ್ಯಾವಂತನಾದರೂ, ಅವನ ಜ್ಞಾನ ನಿಜವಾದ ಜ್ಞಾನ ಅಲ್ಲವೇ ಅಲ್ಲ

निद्रा न विद्या ग्रहणं न विद्या गृह्णाति किञ्चिन्न यथार्थबोधे।
निद्रापदार्थग्रहणेतरा स्यात् चिदेव विद्या विलसन्त्यशून्या ॥ १२ ॥
ನಿದ್ರಾ ನ ವಿದ್ಯಾ ಗ್ರಹಣಂ ನ ವಿದ್ಯಾ
ಗೃಹ್ಣಾತಿ ಕಿಞ್ಚಿನ್ನ ಯಥಾರ್ಥಬೋಧೇ|
ನಿದ್ರಾಪದಾರ್ಥಗ್ರಹಣೇತರಾ ಸ್ಯಾತ್
ಚಿದೇವ ವಿದ್ಯಾ ವಿಲಸನ್ತ್ಯಶೂನ್ಯಾ || ೧೨ ||

ನಿಮ್ಮ ನಿಜವಾದ ಜ್ಞಾನ ತನಿ ನಿದ್ರೆಯಲ್ಲಿ ಇಲ್ಲ. ಕನಸಿನಲ್ಲಿ ಅಥವಾ ಎಚ್ಚರದಲ್ಲಿ ಇಲ್ಲವೇ ಇಲ್ಲ. ಇವೆರಡರಲ್ಲಿ ಬರಿಯ ತಿಳುವಳಿಕೆ ಮತ್ತು ಆನುಭವಾಗಳಿವೆ. ಏಕೆಂದರೆ ಇಲ್ಲಿನ ಸಂಬಂಧಗಳು ಎಲ್ಲವೂ ಹೊರಗಿನ ವಿಷಯಗಳಿಂದ ತಿಳಿದಿದ್ದು. ಆದರೆ ಬರಿಯ ಅರಿವು ಈ ಮೂರು ಅವಸ್ಥೆಗಳನ್ನು ಮೀರಿದ್ದು. ಅದೇ ಶುದ್ಧ ಸತ್ವ. ಶುದ್ಧ ಜ್ಞಾನ ಮತ್ತು ಸ್ವಯಂಜ್ಯೋತಿಯಿಂದ ಬೆಳಗುತ್ತಿರುವುದು. ಅದು ಶೂನ್ಯವಲ್ಲ. ಶೂನ್ಯಸ್ಥಿತಿ ಅಲ್ಲವೇ ಅಲ್ಲ.

सत्यश्चिदात्मा विविधाकृतिश्चित् सिध्येत्पृथक्सत्यचितो न भिन्ना।
भूषाविकाराः किमु सन्ति सत्यं विना सुवर्णं पृथगत्र लोके ॥ १३ ॥
ಸತ್ಯಶ್ಚಿದಾತ್ಮಾ ವಿವಿಧಾಕೃತಿಶ್ಚಿತ್
ಸಿಧ್ಯೇತ್ಪೃಥಕ್ಸತ್ಯಚಿತೋ ನ ಭಿನ್ನಾ|
ಭೂಷಾವಿಕಾರಾಃ ಕಿಮು ಸನ್ತಿ ಸತ್ಯಂ
ವಿನಾ ಸುವರ್ಣಂ ಪೃಥಗತ್ರ ಲೋಕೇ || ೧೩ ||

ಈ ಜಗತ್ತಿನಲ್ಲಿ ಗೋಚರಿಸುತ್ತಿರುವ ಮತ್ತು ನಮಗೆ ತೋರುವ ಅನೇಕ ನಾಮ, ರೂಪಗಳು, ವಿಶೇಷಣಗಳು, ಎಲ್ಲವೂ ಪರಮ ಸತ್ಯದ ಒಂದು ಮುಖವಷ್ಟೇ. ಆವು ಆತ್ಮನಿಂದ ಬೇರ್ಪಡಿಸಲಾಗದ ಸತ್ಯ. ಯಾವ

ರೀತಿಯಲ್ಲಿ ಚಿನ್ನದ ಆಭರಣದಿಂದ ಚಿನ್ನದ ಇರುವಿಕೆಯನ್ನು ಬೇರ್ಪಡಿಸಲು ಸಾಧ್ಯವಿಲ್ಲವೋ ಹಾಗೆ ನಾಮರೂಪಗಳೆಲ್ಲವೂ ಆತ್ಮನ ಚಮತ್ಕಾರಗಳೇ.

तद्युष्मदोरस्मदि संप्रतिष्ठा तस्मिन् विनष्टेऽस्मदि मूलबोधात्।
तद्युष्मदस्मन्मतिवर्जितैका स्थितिर्ज्वलन्ती सहजात्मनः स्यात्॥ १४ ॥
ತದ್ಯುಷ್ಮದೋರಸ್ಮದಿ ಸಂಪ್ರತಿಷ್ಠಾ
ತಸ್ಮಿನ್ ವಿನಷ್ಟೇಽಸ್ಮದಿ ಮೂಲಬೋಧಾತ್|
ತದ್ಯುಷ್ಮದಸ್ಮನ್ಮತಿವರ್ಜಿತೈಕಾ
ಸ್ಥಿತಿರ್ಜ್ವಲನ್ತೀ ಸಹಜಾತ್ಮನಃ ಸ್ಯಾತ್ || ೧೪ ||
ನೀನು ಮತ್ತು ನಿನ್ನದು ಎಂಬ ಭಾವನೆಗೆ ಬುನಾದಿಯಾಗಿ ಇರುವುದು ಈ "ನಾನು" ಎಂಬ ವಸ್ತು. ಆದರೆ ಈ ನಾನು ಎಂಬುದರ ಮೂಲವನ್ನು ತಲುಪಿದಾಗ ನೀನು ನಾನು ಎಲ್ಲವೂ ಇಲ್ಲವಾಗಿಬಿಡುತ್ತದೆ. ನಾನು ನಾನು ಎಂದು ಸ್ಫುರಿಸುತ್ತಿರುವ ಸ್ಥಿತಿಯೇ ಇಲ್ಲವಾದಾಗ ಉಳಿದಿರುವ ಇರುವಿಕೆಯೇ ಪರಬ್ರಹ್ಮ. ಅದೇ ಅವನ ನಿಜವಾದ ಸ್ಥಿತಿ ,ಸ್ವಯಂಪ್ರಕಾಶದ ನೆಲೆ ಮತ್ತು ಎಲ್ಲಾ ಅದ್ಭುತ ತೋರಿಕೆಗಳ ಮೂಲ ಸ್ವರೂಪ.

भूतं भविष्यच्च भवत्स्वकाले तद्वर्तमानस्य विहाय तत्त्वम्।
हास्या न किं स्याद्गतभाविचर्चा विनैकसंख्यां गणनेव लोके ॥ १५ ॥
ಭೂತಂ ಭವಿಷ್ಯಚ್ಚ ಭವತ್ಸ್ವಕಾಲೇ
ತದ್ವರ್ತಮಾನಸ್ಯ ವಿಹಾಯ ತತ್ತ್ವಮ್|
ಹಾಸ್ಯಾ ನ ಕಿಂ ಸ್ಯಾದ್ಗತಭಾವಿಚರ್ಚಾ
ವಿನೈಕಸಂಖ್ಯಾಂ ಗಣನೇವ ಲೋಕೇ || ೧೫ ||

ಹಿಂದೆ ಆಗಿಹೋಗಿದ್ದು ಮುಂದೆ ಆಗಬಹುದಾದದ್ದು ಎಲ್ಲವೂ ಈ ಕ್ಷಣದಲ್ಲಿ ತೋರುತ್ತದೆ ಎಂಬುದು ಎಲ್ಲರಿಗೂ ಗೊತ್ತಿದೆ. ಆದ್ದರಿಂದ ಹಿಂದೆ ಆಗಿಹೋದ ,ಸಮಯದ ಬಗ್ಗೆ ಚಿಂತಿಸಿ ಫಲವೇನು? ಮುಂದೆ ಆಗಬಹುದಾದ ಸ್ಥಿತಿಗಳ ಬಗ್ಗೆ ತಳಮಳಗಳ ಬಗ್ಗೆ ಚಿಂತಿಸಿ ಫಲವೇನು? ನಿಮ್ಮ ಮುಂದೆ ಕಾಣುತ್ತಿರುವ ಸತ್ಯ ಸ್ಥಿತಿಯನ್ನು ಬಿಟ್ಟು ಮತ್ತೆಲ್ಲವನ್ನೂ ಚಿಂತಿಸಿದಾಗ, ನೀವು ಒಂದು ಗುಂಪಿನಲ್ಲಿ ನಿಮ್ಮ ಒಬ್ಬನನ್ನು ಬಿಟ್ಟು ಮತ್ತೆಲ್ಲರನ್ನು ಎಣಿಸಿ ಕಳೆದವನ ಚಿಂತೆಯಲ್ಲೇ ಮುಳುಗಿರುವುದೇ ಅಭಾಸ ಎಂದು ತಿಳಿಯುವುದಿಲ್ಲವೇ?

क्व भाति दिक्कालकथा विनाऽस्मान् दिक्काललीलेह वपुर्वयं चेत्।
न क्वापि भामो न कदापि भामो वयं तु सर्वत्र सदा च भामः ॥ १६ ॥ಕ್ವ ಭಾತಿ ದಿಕ್ಕಾಲಕಥಾ ವಿನಾಽಸ್ಮಾನದಿಕ್ಕಾಲಲೀಲೇಹ
ವಪುರ್ವಯಂ ಚೇತ್|
ನ ಕ್ವಾಪಿ ಭಾಮೋ ನ ಕದಾಪಿ ಭಾಮೋ
ವಯಂ ತು ಸರ್ವತ್ರ ಸದಾ ಚ ಭಾಮಃ || ೧೬ ||

ಕಾಲ ದೇಶಗಳು,ನೊಡಲ್ಪಡುವವನಿಂದ ಬೇರೆಯಲ್ಲ ಎಂಬುದು ಸತ್ಯ ಅಲ್ಲವೆ. ನಾನು ದೇಹ, ನಾನು ದೇಹ ಎಂದೇ ನಂಬಿರುವವರು, ಕಾಲ ದೇಶಗಳ ಪರಿಮಿತಿಯಲ್ಲೇ ಇದ್ದುಬಿಡುತ್ತಾರೆ. ನಿಜ ಸಂಗತಿ ಏನೆಂದರೆ ನಾವು ಒಂದು ನಿರ್ದಿಷ್ಟ ಸಮಯದಲ್ಲಿ ಆಗಲೀ ಅಥವಾ ನಿರ್ದಿಷ್ಟ ಸ್ಥಳದಲ್ಲೇ ಆಗಲಿ ಎಂದೂ ಇಲ್ಲವೇ ಇಲ್ಲ. ಆದರೂ ನಾವು ಎಲ್ಲೆಲ್ಲಿಯೂ ಯಾವಾಗಲೂ ಇರುವುದು ಸತ್ಯವಲ್ಲವೇ.

देहात्मभावे ज्ञजडौ समाना - वेकस्य देहे हृदि दीप्त आत्मा।
आक्रम्य देहं च जगच्च पूर्णः परस्य मेयं तनुमात्रमात्मा ॥ १७ ॥
ದೇಹಾತ್ಮಭಾವೇ ಜ್ಞಜಡೌ ಸಮಾನಾ -

ವೇಕಸ್ಯ ದೇಹೇ ಹೃದಿ ದೀಪ್ತ ಆತ್ಮಾ|
ಆಕ್ರಮ್ಯ ದೇಹಂ ಚ ಜಗಚ್ಚ ಪೂರ್ಣಃ
ಪರಸ್ಯ ಮೇಯಂ ತನುಮಾತ್ರಮಾತ್ಮಾ || ೧೭ ||

ದೇಹಾಭಿಮಾನ ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ಜ್ಞಾನಿ ಮತ್ತು ಅಜ್ಞಾನಿ ಬೇರೆ ಅಲ್ಲ. ಅವರಿಬ್ಬರೂ ಒಂದೇ. ಆದರೆ ಜ್ಞಾನಿಯಾದವನು, ಆತ್ಮನನ್ನು ತನ್ನ ಹೃದಯದಲ್ಲಿ ಗುರುತಿಸಿಕೊಂಡು, ದೇಶ, ಕಾಲ, ಸಮಯ ಸಂಬಂಧಗಳಿಂದ ದಾಟಿ ಪ್ರಪಂಚದ ಎಲ್ಲೆಯಿಂದ ಆಚೆ ಹೊರಟು, ತಾನೇ ಎಲ್ಲೆಲ್ಲೂ ಇರುವಂತೆ ಆಗಿಬಿಡುತ್ತಾನೆ. ಆದರೆ, ಆಜ್ಞಾನಿಯಾದರೋ, ತಾನೇ ದೇಹವೆಂದು ತಿಳಿದು ಸಂಕುಚಿತ ಭಾವನೆಯಲ್ಲಿ ಮತ್ತು ತನ್ನ ಸ್ವರೂಪದಲ್ಲಿ ತನ್ನನ್ನು ಉಳಿಸಿಕೊಂಡು ಬಿಡುತ್ತಾನೆ.

देहात्मभावे ज्ञजडौ समाना वेकस्य देहे हृदि दीप्त आत्मा।
आक्रम्य देहं च जगच्च पूर्णःपरस्य मेयतनुमात्रमात्मा॥१७

ಅಜ್ಞಸ್ಯ ವಿಜ್ಞಸ್ಯ ಚ ವಿಶ್ವಮಸ್ತಿ
ಪೂರ್ವಸ್ಯ ದೃಶ್ಯಂ ಜಗದೇವ ಸತ್ಯಮ್|
ಪರಸ್ಯ ದೃಶ್ಯಾಶ್ರಯಭೂತಮೇಕಂ
ಸತ್ಯಂ ಪ್ರಪೂರ್ಣಂ ಪ್ರವಿಭಾತ್ಯರೂಪಮ್ || ೧೮ ||

ಈ ಪ್ರಪಂಚವು,ಅಜ್ಞಾನಿಗಳಿಗೂ ಮತ್ತು ಜ್ಞಾನಿಗಳಿಗೂ ಒಂದೇ ತರಹ ಪ್ರಪಂಚದಂತೆ ತೋರುತ್ತದೆ. ಆದರೆ ಅಜ್ಞಾನಿಗೆ, ತನಗೆ ಕಾಣುತ್ತಿರುವ ಪ್ರಪಂಚವೇ ಸತ್ಯ ಎಂದು ಎನಿಸುತ್ತದೆ. ಆದರೆ ಜ್ಞಾನಿಗಾದರೊ. ಎಲ್ಲ ಕಡೆಯಲ್ಲೂ ತೋರುವ ಮತ್ತು ನಾಮ ರೂಪಗಳು ಇಲ್ಲದ ಆತ್ಮ ಒಂದೇ ಸತ್ಯ. ಈ ಆತ್ಮನೇ ಜಗತ್ತಿಗೆ ಮೂಲ ಕಾರಣ ಎಂದು ಖಚಿತವಾಗಿ ತಿಳಿಯುತ್ತದೆ.

विधेः प्रयत्नस्य च कोऽपि वाद स्तयोर्द्वयोर्मूलमजानतां स्यात्।

विधेः प्रयत्नस्य च मूलवस्तु सञ्जानतां नैव विधिर्न यत्नः ॥
१९ ॥
ವಿಧೇಃ ಪ್ರಯತ್ನಸ್ಯ ಚ ಕೋಽಪಿ ವಾದ -
ಸ್ತಯೋರ್ದ್ವಯೋರ್ಮೂಲಮಜಾನತಾಂ ಸ್ಯಾತ್|
ವಿಧೇಃ ಪ್ರಯತ್ನಸ್ಯ ಚ ಮೂಲವಸ್ತು
ಸಞ್ಜಾನತಾಂ ನೈವ ವಿಧಿರ್ನ ಯತ್ನಃ || ೧೯ ||

ವಿಧಿ ಮತ್ತು ಸ್ವತಂತ್ರ ಪೌರುಷದ ಬಗ್ಗೆ ಮಾತನಾಡುವರಿಗೆ, ಇವೆರಡರ ಬಗ್ಗೆ ಮತ್ತು ಅವುಗಳ ಸತ್ಯಾಸತ್ಯತೆಯ ಬಗ್ಗೆ ತಿಳುವಳಿಕೆಯೇ ಇರುವುದಿಲ್ಲ. ಆದರೆ ತನ್ನನ್ನು ಕಂಡುಕೊಂಡವರಿಗೆ. ಅವೆರಡನ್ನೂ ಅಲ್ಲಗಳೆದು, ಇದು ಸತ್ಯದ ತಳಹದಿ ಎಂದು ತಿಳಿದಾಗ, ವಿಧಿ ಮತ್ತು ಸ್ವಾತಂತ್ರ್ಯ ಇವೆರಡೂ ಮಿಥ್ಯ ಎಂದು ತಿಳಿಯುತ್ತದೆ.

यदीशितुर्वीक्षणमीक्षितार मवीक्ष्य तन्मानसिकेक्षणं स्यात्।
न द्रष्टुरन्यः परमो हि तस्य वीक्षा स्वमूले प्रविलीय निष्ठा ॥
२० ॥
ಯದೀಶಿತುರ್ವೀಕ್ಷಣಮೀಕ್ಷಿತಾರ -
ಮವೀಕ್ಷ್ಯ ತನ್ಮಾನಸಿಕೇಕ್ಷಣಂ ಸ್ಯಾತ್|
ನ ದ್ರಷ್ಟುರನ್ಯಃ ಪರಮೋ ಹಿ ತಸ್ಯ
ವೀಕ್ಷಾ ಸ್ವಮೂಲೇ ಪ್ರವಿಲೀಯ ನಿಷ್ಠಾ || ೨೦ ||

ಆತ್ಮನನ್ನು ಅಥವಾ ನೋಡುವವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳದವರಿಗೆ, ದೇವರು ಎಂಬುದು ಒಂದು ಮನಸ್ಸಿನ ಆಟವೇ ಸರಿ. ನೋಡುವವನ ಹೊರತು ಬೇರೆ ದೇವರಿಲ್ಲ. ತನ್ನ ಮೂಲ ಸ್ವರೂಪದಲ್ಲಿ ಮುಳುಗಿ ನಿಲ್ಲುವುದೇ ದೇವರ ದರ್ಶನ ಎಂದು ತಿಳಿಯಬೇಕು.

आत्मानमीक्षेत परं प्रपश्ये   दित्यागमोक्तेः सुलभो न भावः।
नात्मैव दृश्यो यदि का कथेशे  स्वयं तदन्नीभवनं तदीक्षा ॥
२१ ॥
ಆತ್ಮಾನಮೀಕ್ಷೇತ ಪರಂ ಪ್ರಪಶ್ಯೇ -
ದಿತ್ಯಾಗಮೋಕ್ತೇಃ ಸುಲಭೋ ನ ಭಾವಃ|
ನಾತ್ಮೈವ ದೃಶ್ಯೋ ಯದಿ ಕಾ ಕಥೇಶೇ
ಸ್ವಯಂ ತದನ್ನೀಭವನಂ ತದೀಕ್ಷಾ || ೨೧ ||

ಮೊದಲು ಆತ್ಮ ಜ್ಞಾನವನ್ನು ಪಡೆದುಕೊ, ಆಗ ನಿನಗೆ ಸರ್ವೇಶ್ವರನ ದರ್ಶನವಾಗುತ್ತದೆ ಎಂದು ವೇದಗಳು ಸಾರಿ ಸಾರಿ ಹೇಳುತ್ತಿವೆ. ಆದರೆ ಈ ಸೂಕ್ಷ್ಮವಾದ ಅರ್ಥ ಬಹಳಷ್ಟು ಜನರಿಗೆ ಇನ್ನೂ ಸ್ಪಷ್ಟವಾಗಿಯೇ ಕಾಣುತ್ತಿಲ್ಲ. ಆತ್ಮನನ್ನೇ ನೋಡಲು ನಿಮಗೆ ಅಸಾಧ್ಯವಾದಾಗ ಸರ್ವೇಶ್ವರ ನಿಮಗೆ ಎಲ್ಲಿಂದ ಮತ್ತು ಹೇಗೆ ತೋರುತ್ತಾನೆ?  ದೇವರನ್ನು ನೋಡುವುದು ಎಂದರೆ ನಿಮ್ಮ ಮನಸ್ಸನ್ನೇ ದೇವರಿಗೆ ಉಣಬಡಿಸಬೇಕು.  ಆಗ ನೀವು ಅವನ ದರ್ಶನದ ಲಾಭ ಪಡೆಯಬಹುದು.

धिये प्रकाशं परमो वितीर्य  स्वयं धियोऽन्तः प्रविभाति गुप्तः।
धियं परावर्त्य धियोन्तरेऽत्र  संयोजनान्नेश्वरदृष्टिरन्या ॥ २२
॥
ಧಿಯೇ ಪ್ರಕಾಶಂ ಪರಮೋ ವಿತೀರ್ಯ
ಸ್ವಯಂ ಧಿಯೋಽನ್ತಃ ಪ್ರವಿಭಾತಿ ಗುಪ್ತಃ|
ಧಿಯಂ ಪರಾವರ್ತ್ಯ ಧಿಯೋನ್ತರೇಽತ್ರ
ಸಂಯೋಜನಾನ್ನೇಶ್ವರದೃಷ್ಟಿರನ್ಯಾ || ೨೨ ||

ನಮ್ಮ ಅಂತಃಕರಣಕ್ಕೆ ಬೆಳಕನ್ನು ಚೆಲ್ಲಿ ಅದರ ಮತ್ತು ಎಲ್ಲದರ ಹಿಂದೆ ಇದ್ದುಕೊಂಡು ಆತ್ಮನು ಸ್ವಯಂ ಜ್ಯೋತಿಯಾಗಿ ಬೆಳಗುತ್ತಿರುತ್ತಾನೆ. ಆತ್ಮ ಚಿಂತನೆಯಲ್ಲೇ ಮನಸ್ಸನ್ನು ನಿಲ್ಲಿಸಿಕೊಂಡು ಚಿತ್ತವನ್ನು ದಾಟಿ ಪೂರ್ಣ ಪ್ರಜ್ಞೆಯಲ್ಲಿ ಬೆರೆತು ಹೋಗುವುದೇ ಮತ್ತು ಅಲ್ಲಿ ನಿಲ್ಲುವುದೇ

ಆತ್ಮ ಸಾಕ್ಷಾತ್ಕಾರದ ದಾರಿಯೇ ಹೊರತು ,ಬೇರೆ ಯಾವ ಮಾರ್ಗವೂ ಇಲ್ಲ.

न वक्ति देहोऽहमिति प्रसुप्तौ न कोपि नाभूवमिति प्रवक्ति।
यत्रोदिते सर्वमुदेति तस्य धियाऽहमः शोधय जन्मदेशम् ॥ २३ ॥

ನ ವಕ್ತಿ ದೇಹೋಽಹಮಿತಿ ಪ್ರಸುಪ್ತೌ
ನ ಕೋಽಪಿ ನಾಭೂವಮಿತಿ ಪ್ರವಕ್ತಿ|
ಯತ್ರೋದಿತೇ ಸರ್ವಮುದೇತಿ ತಸ್ಯ
ಧಿಯಾಽಹಮಃ ಶೋಧಯ ಜನ್ಮದೇಶಮ್ || ೨೩ ||

ನಿದ್ರೆಮಾಡುತ್ತಿರುವವ, ನಾನೇ ಈ ದೇಹ ಬುದ್ಧಿ ಮನಸ್ಸು ಎಂದು ಯಾರಾದರೂ ಹೇಳುವುದನ್ನು ಕೇಳಿದ್ದೀರಾ? ಅದೇ ರೀತಿ, ಎಚ್ಚರಗೊಂಡವ, ನಾನು ನಿದ್ದೆಯಲ್ಲಿ ಇರಲೇ ಇಲ್ಲ ಎಂದು ಹೇಳುವುದನ್ನು ಕೇಳಿದ್ದೀರಾ? ಅಥವಾ ನಾನು ನಿದ್ದೆಯಲ್ಲಿ ಇರಲಿಲ್ಲ ಎಂದು ಹೇಳುತ್ತಾನೆಯೇ? ಅಹಂಕಾರದ ಆ ಅಹಂ ಸ್ಫುರಣದ ಮೂಲ ಸ್ವರೂಪವನ್ನು ಹುಡುಕಿ, ಆ ತರಂಗಗಳು ಎಲ್ಲಿ ಏಳುತ್ತಿದೆ ಎಂಬುದರ ಬಗ್ಗೆ ವಿಚಾರ ಮಾಡು.

देहो न जानाति सतो न जन्म देहप्रमाणोऽन्य उदेति मध्ये।
अहङ्कृतिग्रन्थिविबन्धसूक्ष्म शरीरचेतोभवजीवनामा ॥ २४ ॥

ದೇಹೋ ನ ಜಾನಾತಿ ಸತೋ ನ ಜನ್ಮ
ದೇಹಪ್ರಮಾಣೋಽನ್ಯ ಉದೇತಿ ಮಧ್ಯೇ|
ಅಹಙ್ಕೃತಿಗ್ರನ್ಥಿವಿಬನ್ಧಸೂಕ್ಷ್ಮ -
ಶರೀರಚೇತೋಭವಜೀವನಾಮಾ || ೨೪ ||

ಹುಟ್ಟಿದ ದೇಹವು ತನ್ನನ್ನು ತಾನು ಅರಿಯಲಾರದು. ಅರಿಯುವ ಆತ್ಮನಿಗೆ ಹುಟ್ಟೇ ಇಲ್ಲ. ಇವೆರಡರ ಮಧ್ಯೆ ಮತ್ತೊಂದು ರೂಪವು, ಮನಸ್ಸು ಮತ್ತು ಬುದ್ಧಿಗೆ ಸಂಭಂದಿಸಿದಂತೆ ಏಳುತ್ತದೆ. ಇದನ್ನು

ಹೃದಯಗ್ರಂಥಿ, ಅಹಂಸ್ಫುರಣ ಸೂಕ್ಷ್ಮಶರೀರ, ಅಂತಃಕರಣ, ಸಂಸಾರಿ ಜೀವ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.

रूपोद्भवो रूपततिप्रतिष्ठो रूपाशनो धूतगृहीतरूपः।
स्वयं विरूपः स्वविचारकाले धावत्यहङ्कारपिशाच एषः ॥ २५ ॥
ರೂಪೋದ್ಭವೋ ರೂಪತತಿಪ್ರತಿಷ್ಠೋ
ರೂಪಾಶನೋ ಧೂತಗೃಹೀತರೂಪಃ|
ಸ್ವಯಂ ವಿರೂಪಃ ಸ್ವವಿಚಾರಕಾಲೇ
ಧಾವತ್ಯಹಙ್ಕಾರಪಿಶಾಚ ಏಷಃ || ೨೫ ||

ಎಲ್ಲ ನಾಮರೂಪಗಳ ಮೂಲ ಸ್ವರೂಪವೇ ಅಹಂಕಾರ. ಈ ನಾಮ ರೂಪಗಳನ್ನು ಸೃಷ್ಟಿಸಿ, ಅದರಲ್ಲೇ ಬಂಧಿತನಾಗಿ ಅದರಲ್ಲೇ ಅಹಂಕಾರ ಬೆಳೆಯುತ್ತಾ ಇರುತ್ತದೆ. ಈ ನಾಮ ರೂಪಗಳನ್ನೇ ಹೊರ ಹಾಕಿ ಅವುಗಳನ್ನು ತನ್ನ ಒಳಗೆ ಮತ್ತೆ ಹಿಂದಕ್ಕೆ ಎಳೆದುಕೊಳ್ಳುತ್ತದೆ. ಯಾವಾಗ ಅಹಂಕಾರವು ತನ್ನ ಸ್ವಂತ ಇರುವಿಕೆಯ ಬಗೆಗೆ ಚಿಂತಿಸಲು ಮೊದಲು ಮಾಡುವುದೋ, ಆಗ ಭೂತವಾಗಿ ತಲೆದೋರುತ್ತಿದ್ದ ಅದೇ ಮಾಯವಾಗಿಬಿಡುತ್ತದೆ.
भावेऽहमः सर्वमिदं विभाति लयेऽहमो नैव विभाति किञ्चित्।
तस्मादहंरूपमिदं समस्तं तन्मार्गणं सर्वजयाय मार्गः ॥ २६ ॥
ಭಾವೇಽಹಮಃ ಸರ್ವಮಿದಂ ವಿಭಾತಿ
ಲಯೇಽಹಮೋ ನೈವ ವಿಭಾತಿ ಕಿಞ್ಚಿತ್|
ತಸ್ಮಾದಹಂರೂಪಮಿದಂ ಸಮಸ್ತಂ
ತನ್ಮಾರ್ಗಣಂ ಸರ್ವಜಯಾಯ ಮಾರ್ಗಃ || ೨೬ ||

ಅಹಂಕಾರವು ತಲೆದೋರಿದಾಗ ಜಗತ್ತಿನ ಎಲ್ಲ ನಾಮ ರೂಪಗಳು ಗೋಚರಿಸುತ್ತದೆ. ಅದು ನಿದ್ರಿಸಿದಾಗ(ಅಹಂಕಾರವು) ಏನೂ ಗೋಚರವಾಗದಂತೆ ಇರುತ್ತದೆ. ಅಂದರೆ ಅದು ಸ್ತಬ್ಧವಾಗಿಬಿಡುತ್ತದೆ. ಆದರಿಂದ ಬಾಹ್ಯ ಪ್ರಪಂಚದಲ್ಲಿ ತೊರುವ ಮತ್ತು ನಮ್ಮ ಅನುಭವಕ್ಕೆ

ಬರುವ ಎಲ್ಲಾ ನಾಮ ರೂಪಗಳು ಅಹಂಕಾರದ ಒಂದು ಆಯಾಮವಲ್ಲದೆ ಮತ್ತೇನೂ ಬೇರೆ ಅಲ್ಲ. ಆದ್ದರಿಂದ, ನಾವು ಸಾಧನಾ ಪಥದಲ್ಲಿ ತೊಡಗಿ ತುದಿಯನ್ನು ಮುಟ್ಟಬೇಕಾದರೆ,ಈ ಅಹಂಕಾರದ ಮೂಲವನ್ನು ಹಿಡಿಯುವುದು ಬಹಳ ಅತ್ಯಗತ್ಯ. ಆಗಲೇ ನಾವು ಚಿನ್ಮಾತ್ರ ಸ್ವರೂಪದಲ್ಲಿ ನಿಲ್ಲಬಹುದು, ಏಕೆಂದರೆ, ಎಲ್ಲೆಡೆ ಎನೇನು ಇದೆಯೋ ಅದೆಲ್ಲವೂ ಆ ಚಿತ್ ಸ್ವರೂಪದಲ್ಲಿ ಅಡಕವಾಗಿದೆ/..

सत्या स्थितिर्नाहमुदेति यत्र तच्चोदयस्थानगवेषणेन।
विना न नश्येद्यदि तन्न नश्येत् स्वात्मैक्यरूपा कथमस्तु निष्ठा ॥ २७ ॥
ಸತ್ಯಾ ಸ್ಥಿತಿರ್ನಾಹಮುದೇತಿ ಯತ್ರ
ತಚ್ಚೋದಯಸ್ಥಾನಗವೇಷಣೇನ|
ವಿನಾ ನ ನಶ್ಯೇದ್ಯದಿ ತನ್ನ ನಶ್ಯೇತ್
ಸ್ವಾತ್ಮೈಕ್ಯರೂಪಾ ಕಥಮಸ್ತು ನಿಷ್ಠಾ || ೨೭ ||

ಅಹಂಕಾರವು ಸ್ಪುರಿಸದಂತಹ ಸ್ಥಿತಿಯೇ ನಿಮ್ಮ ನಿಜವಾದ ಇರುವಿಕೆ. ಇದರ ಮೂಲವನ್ನು ಹುಡುಕದಿದ್ದರೆ ಅದನ್ನು ನಾಶ ಮಾಡಲು ಆಗುವುದಿಲ್ಲ. ಅದು ನಾಶವಾಗದಿದ್ದಾಗ ಹೇಗೆ ತಾನೇ ನಿಮ್ಮ ಮೂಲ ಇರುವಿಕೆಯ ಏಕತ್ವವನ್ನು ಮತ್ತು ಅದರ ಭಾವನೆಯನ್ನು ಹೊಂದಬಲ್ಲಿರಿ. ಎಲ್ಲವೂ ಆತ್ಮನ ಒಂದು ಅಂಶವೇ ಎಂದು ನೀವು ತಿಳಿಯುವಂತಹ ಸ್ಥಿತಿ ಬರಲು ಅಹಂಕಾರ ನಾಶವೇ ಕಾರಣ.

कूपे यथा गाढजले तथान्तः निमज्ज्य बुद्ध्या शितया नितान्तम्।
प्राणं च वाचं च नियम्य चिन्वन्
विन्देन्निजाहङ्कृतिमूलरूपम् ॥ २८ ॥
ಕೂಪೇ ಯಥಾ ಗಾಢಜಲೇ ತಥಾನ್ತಃ
ನಿಮಜ್ಜ್ಯ ಬುದ್ಧ್ಯಾ ಶಿತಯಾ ನಿತಾನ್ತಮ್|

ಪ್ರಾಣಂ ಚ ವಾಚಂ ಚ ನಿಯಮ್ಯ ಚಿನ್ವನ್
ವಿನ್ದೇನ್ನಿಜಾಹಙ್ಕೃತಿಮೂಲರೂಪಮ್ || ೨೮ ||

ಭಾವಿಯಲ್ಲಿ ಹುದುಗಿರುವ ಒಂದು ವಸ್ತುವನ್ನು ಹೊರತರಲು,ನೀವು ಯಾವ ರೀತಿ ಅದರ ಆಳದ ಉದ್ದಕ್ಕೂ ಇರುವ ನೀರಿನಲ್ಲಿ ತಳಕ್ಕೆ ಮುಳುಗುವಿರೋ,ಅದೇ ರೀತಿ ನಿಮ್ಮ ಸೂಕ್ಷ್ಮ ಬುದ್ಧಿಯಿಂದ ನಿಮ್ಮಲ್ಲಿಯೇ ಅಂತರಾಳಕ್ಕೆ ಮುಳುಗಿ ವಾಕ್ ಮತ್ತು ಉಸಿರನ್ನು ನಿರೋಧಿಸಿ, ಅಹಂಕಾರದ ಮೂಲವನ್ನು ಹುಡುಕಿ ತೆಗೆಯಬೇಕು.

मौनेन मज्जन्मनसा स्वमूल चर्चैव सत्यात्मविचारणं स्यात्।
एषोऽहमेतन्न मम स्वरूप मिति प्रमा सत्यविचारणाङ्गम् ॥
२९ ॥
ಮೌನೇನ ಮಜ್ಜನ್ಮನಸಾ ಸ್ವಮೂಲ -
ಚರ್ಚೈವ ಸತ್ಯಾತ್ಮವಿಚಾರಣಂ ಸ್ಯಾತ್|
ಏಷೋಽಹಮೇತನ್ನ ಮಮ ಸ್ವರೂಪ -
ಮಿತಿ ಪ್ರಮಾ ಸತ್ಯವಿಚಾರಣಾಙ್ಗಮ್ || ೨೯ ||

ಮನಸ್ಸು ಸ್ತಬ್ಧವಾದಾಗ, ಅದೇ, ಅದರ ಅಂತರಾಳದಲ್ಲಿ ಮುಳುಗಿ ಮೂಲವನ್ನು ಹುಡುಕಲು ಪ್ರಯತ್ನಿಸುತ್ತದೆ. ಇದನ್ನು ಸ್ವ ದರ್ಶನ ಎನ್ನುತ್ತೇವೆ. ನಾನು ದೇಹವಲ್ಲ ಮನಸ್ಸೂ ಅಲ್ಲ ಬುದ್ಧಿ ಅಥವಾ ಜ್ಞಾನವೂ ಅಲ್ಲ,ನಾನು ಬಚ್ಚ ಬರಿಯ ಆತ್ಮಸ್ವರೂಪ ಎಂಬ ಸಣ್ಣ ಸಣ್ಣ ಸೂಚನೆಗಳು ಆತ್ಮದರ್ಶನಕ್ಕೆ ಸಹಕಾರಿಯಾಗಬಲ್ಲದು.

गवेषणात्प्राप्य हृदन्तरं तत् पतेदहन्ता परिभुग्नशीर्षा।
अथाहमन्यत्स्फुरति प्रकृष्टं नाहङ्कृतिस्तत्परमेव पूर्णम् ॥
३०
ಗವೇಷಣಾತ್ಪ್ರಾಪ್ಯ ಹೃದನ್ತರಂ ತತ್
ಪತೇದಹನ್ತಾ ಪರಿಭುಗ್ನಶೀರ್ಷಾ|
ಅಥಾಹಮನ್ಯತ್ಸ್ಫುರತಿ ಪ್ರಕೃಷ್ಟಂ

ನಾಹಙ್ಕೃತಿಸ್ತತ್ಪರಮೇವ ಪೂರ್ಣಮ್ || ೩೦

ಈ ರೀತಿಯಾದ ಆತ್ಮನ ಹುಡುಕುವಿಕೆಯಿಂದ ಚಿತ್ ಸ್ವರೂಪದ ತಳವು ಯಾವಾಗ ಕಂಡುಬರುತ್ತದೆಯೋ ಆ ಕ್ಷಣದಲ್ಲಿಯೇ ತಲೆದೋರುತ್ತಿರುವ ಅಹಂಕಾರವು ಕಳಚಿ ಬಿಟ್ಟು ನುಚ್ಚು ನೂರಾಗಿ ಬಿಡುತ್ತದೆ. ಆಗ ನಿಮಗೆ ಮತ್ತೊಂದು 'ನಾನು' ಗೋಚರವಾಗಿ,, ಅದೇ ಸ್ವಯಂಜ್ಯೋತಿ ಸ್ವರೂಪ ಎಂದು ಸ್ಪಷ್ಟವಾಗಿ ತಿಳಿದು ಬರುತ್ತದೆ.

अहङ्कृतिं यो लसति ग्रसित्वा किं तस्य कार्यं
परिशिष्टमस्ति।
किञ्चिद्विजानाति स नात्मनोऽन्यत्तस्य स्थितिं भावयितुं
क्षमः कः॥ ३१ ॥
ಅಹಙ್ಕೃತಿಂ ಯೋ ಲಸತಿ ಗ್ರಸಿತ್ವಾ
ಕಿಂ ತಸ್ಯ ಕಾರ್ಯಂ ಪರಿಶಿಷ್ಟಮಸ್ತಿ|
ಕಿಞ್ಚಿದ್ವಿಜಾನಾತಿ ಸ ನಾತ್ಮನೋऽನ್ಯತ್
ತಸ್ಯ ಸ್ಥಿತಿಂ ಭಾವಯಿತುಂ ಕ್ಷಮಃ ಕಃ || ೩೧ ||

ಅಹಂಕಾರವನ್ನು ನಾಶ ಮಾಡಿದಂತಹವನಿಗೆ ಜಗತ್ತಿನಲ್ಲಿ ಯಾವ ಕಾರ್ಯವಾಗಲೀ ಜವಾಬ್ದಾರಿಗಳಾಗಲೀ ಇರುತ್ತದೆಯೇ? ಅಂತಹವನಿಗೆ ಆತ್ಮದ ಹೊರತು, ತನ್ನಿಂದ ಬೇರೆ ಯಾರೂ ಇಲ್ಲ ಎಂಬುದೇ ದೃಢವಾಗಿಬಿಡುತ್ತದೆ. ಆತ್ಮನ ನಿಜವಾದ ಸ್ವರೂಪದ ಬಗ್ಗೆ ತಾನು "ಚಿಂತಿಸಿರುವೆ ಮತ್ತು ಆತ್ಮನನ್ನು ಕಂಡಿರುವೆ" ಎಂದು ಖಚಿತವಾಗಿ ದೃಡ ಪಡಿಸುವರು ಯಾರಾದರೂ ಇದ್ದಾರೆಯೇ?

आह स्फुटं तत्त्वमसीति वेद स्तथाप्यसंप्राप्य
परात्मनिष्ठाम्।
भूयो विचारो मतिदुर्बलत्वं तत्सर्वदा स्वात्मतया हि भाति ॥
३२ ॥
ಆಹ ಸ್ಫುಟಂ ತತ್ತ್ವಮಸೀತಿ ವೇದ -

ಸ್ತಥಾಪ್ಯಸಂಪ್ರಾಪ್ಯ ಪರಾತ್ಮನಿಷ್ಠಾಮ್|
ಭೂಯೋ ವಿಚಾರೋ ಮತಿದುರ್ಬಲತ್ವಂ
ತತ್ಸರ್ವದಾ ಸ್ವಾತ್ಮತಯಾ ಹಿ ಭಾತಿ || ೩೧ ||

'ಅದು ನೀನೇ ಆಗಿದ್ದೀಯೆ' ಅಥವಾ ಅದು ನೀನೇ ಎಂದು ನಿಖರವಾಗಿ ತಿಳಿಸುತ್ತಿದ್ದರೂ ಆತ್ಮನಿಷ್ಠೆ ಇದ್ದರೂ, ನಿನ್ನ ನಿಜ ಸ್ವರೂಪವನ್ನು ಕಂಡುಕೊಳ್ಳದೆ, ಬರಿಯ ಪೊಳ್ಳು ವಾದದಲ್ಲಿ ನಿನ್ನನ್ನು ತೊಡಗಿಸಿಕೊಂಡೆ ಯಾದರೆ, ಅದು ನಿನ್ನ ಮನಸ್ಸಿನ ಸಂಕುಚಿತ ಅವಸ್ಥೆ ಅಥವಾ ಅದರ ದುರ್ಬಲತೆ ಎಂದು ತಿಳಿಯಬೇಕು.( ನನ್ನಲ್ಲಿ ಆತ್ಮಸ್ವರೂಪ ಇದೆಯೋ ಇಲ್ಲವೋ ಎಂಬ ಶಂಕೆ) ಒಂದು ವೇಳೆ ನಿನಗೆ ಅದರಲ್ಲಿ ನಂಬಿಕೆ ಇಲ್ಲದಿದ್ದರೂ ಸಹ ಆತ್ಮನು ನಿನ್ನಲ್ಲಿ ಸದಾ ಬೆಳಗುತ್ತಿರುವುದು ಸತ್ಯವಾದ ವಿಷಯ.

न वेद्म्यहं मामुत वेद्म्यहं मा - मिति प्रवादो मनुजस्य हास्यः।
दृग्दृश्यभेदात्किमयं द्विधात्मा स्वात्मैकतायां हि धियां न भेदाः ॥ ३३ ॥
ನ ವೇದ್ಮ್ಯಹಂ ಮಾಮುತ ವೇದ್ಮ್ಯಹಂ ಮಾ -
ಮಿತಿ ಪ್ರವಾದೋ ಮನುಜಸ್ಯ ಹಾಸ್ಯಃ|
ದೃಗ್ದೃಶ್ಯಭೇದಾತ್ಕಿಮಯಂ ದ್ವಿಧಾತ್ಮಾ
ಸ್ವಾತ್ಮೈಕತಾಯಾಂ ಹಿ ಧಿಯಾಂ ನ ಭೇದಾಃ || ೩೨ ||

ನನಗೆ ಎಲ್ಲವೂ ಗೊತ್ತಿದೆ ಮತ್ತು ನನಗೆ ಏನೂ ತಿಳಿದಿಲ್ಲ ಎನ್ನುವ ಎರಡು ಆಯಾಮಗಳೂ ಬರಿಯ ಮೂಢತನವೇ ಸರಿ. ನೋಡುವವ ಮತ್ತು ನೋಡಲ್ಪಡುವವ ಎಂಬ ಇಬ್ಬರು ಆತ್ಮರು ಎಲ್ಲಾದರೂ ಇದ್ದಾರೆಯೇ? ನಿನಗೆ ಸಾಕ್ಷಾತ್ಕಾರವಾದರೆ ,ಈ ಆತ್ಮ ಒಂದೇ, ಎರಡಲ್ಲ ಎಂಬುದು ಸ್ಪಷ್ಟವಾಗಿಬಿಡುತ್ತದೆ.

हृत्प्राप्यसद्धाम निजस्वरूपे स्वभावसिद्धेऽनुपलभ्य निष्ठाम्।
मायाविलासः सदसत्सरूप विरूपनानैकमुखप्रवादाः ॥ ३४ ॥
ಹೃತ್ಪ್ರಾಪ್ಯಸದ್ಧಾಮ ನಿಜಸ್ವರೂಪೇ
ಸ್ವಭಾವಸಿದ್ಧೇಽನುಪಲಭ್ಯ ನಿಷ್ಠಾಮ್|
ಮಾಯಾವಿಲಾಸಃ ಸದಸತ್ಸರೂಪ -
ವಿರೂಪನಾನ್ಯೈಕಮುಖಪ್ರವಾದಾಃ || ೩೪ ||

ಎಲ್ಲರ ಮುಖ್ಯ ಧೇಯವು, ಆ ಆತ್ಮನಿಷ್ಠೆಯಲ್ಲಿ ಮುಳುಗಿ ತನ್ನನ್ನು ತಾನು ಕಂಡುಕೊಳ್ಳುವುದೇ ಆಗಿರಬೇಕು. ಮತ್ತೆ ಯಾವ ರೀತಿಯ ಶಕ್ತಿಯನ್ನೂ ಸಂಪಾದಿಸುವ ಪ್ರಯತ್ನ ಮಾಡಬಾರದು. ಏಕೆಂದರೆ ಇಂತಹ ಶಕ್ತಿಗಳು ಬರಿಯ ಭ್ರಮೆ ಮತ್ತು ಕನಸುಗಳು ಅಷ್ಟೆ. ನಿದ್ರೆಯಿಂದ ಎಚ್ಚೆತವ, ತಾನು ನೋಡಿದ ಕನಸು ಸತ್ಯ ಎಂದು ತಿಳಿಸುವುದನ್ನು ನೀವು ನೋಡಿದ್ದೀರಾ? ಅಥವಾ ಸತ್ಯ ದರ್ಶನ ಆದ ಮೇಲೆ ಯಾರಾದರೂ ಈ ಮಾಯೆಯ ಜೀವನ ಮತ್ತು ಪ್ರಪಂಚದ ಜೀವನದಲ್ಲಿ ಮುಳುಗಿರುವುದನ್ನು ಎಂದಾದರೂ ನೋಡಿದ್ದೀರಾ?

सिद्धस्य वित्तिः सत एव सिद्धिः स्वप्नोपमानाः खलु सिद्धयोऽन्याः।
स्वप्नः प्रबुद्धस्य कथं नु सत्यः सति स्थितः किं पुनरेति मायाम् ॥ ३५ ॥
ಸಿದ್ಧಸ್ಯ ವಿತ್ತಿಃ ಸತ ಏವ ಸಿದ್ಧಿಃ
ಸ್ವಪ್ನೋಪಮಾನಾಃ ಖಲು ಸಿದ್ಧಯೋಽನ್ಯಾಃ|
ಸ್ವಪ್ನಃ ಪ್ರಬುದ್ಧಸ್ಯ ಕಥಂ ನು ಸತ್ಯಃ
ಸತಿ ಸ್ಥಿತಃ ಕಿಂ ಪುನರೇತಿ ಮಾಯಾಮ್ || ೩೫ ||

ಆತ್ಮನು ಇರುವನೋ ಇಲ್ಲವೋ ನಿಜವೋ ಸುಳ್ಳೋ ಅವನು ನಾಮ ರೂಪಗಳಿಂದ ಕೂಡಿದುವವನೋ ಇಲ್ಲವೋ ಅಥವಾ ಬರಿಯ ಮಾಯೆಯೋ, ಅವನು ಒಬ್ಬನೋ ಬಹಳ ಜನರೋ ಎಂಬ

ಪೊಳ್ಳುಮಾತುಗಳು ಮತ್ತು ವಾದಗಳು ಆ ಚಿನ್ಮಾತ್ರ ಸ್ವರೂಪವನ್ನು ಪಡೆಯದೆ ಇರುವವರ ಹುಸಿ ಮಾತುಗಳು.

सोऽहंविचारो वपुरात्मभावे साहाय्यकारी परमार्गणस्य।
स्वात्मैक्यसिद्धौ स पुनर्निरर्थो यथा नरत्वप्रमितिर्नरस्य ॥
३६ ॥
ಸೋಽಹಂವಿಚಾರೋ ವಪುರಾತ್ಮಭಾವೇ
ಸಾಹಾಯ್ಯಕಾರೀ ಪರಮಾರ್ಗಣಸ್ಯ|
ಸ್ವಾತ್ಮೈಕ್ಯಸಿದ್ಧೌ ಸ ಪುನರ್ನಿರರ್ಥೋ
ಯಥಾ ನರತ್ವಪ್ರಮಿತಿರ್ನರಸ್ಯ || ೩೬ ||

ಎಲ್ಲಿಇಯವರೆಗೆ ಮನುಷ್ಯನು, ಈ ದೇಹ ಮನಸ್ಸು ಮತ್ತು ಬುದ್ಧಿಗಳಿಂದ ಆವರಿಸಿಕೊಂಡು ಇರುವನೋ, ಅಲ್ಲಿಯವರೆಗೆ ಸೋಹಮ್ ಭಾವನೆಯ ನಿಧಿಧ್ಯಾಸನ, ಆತ್ಮನನ್ನು ಪಡೆಯಲು ಸಹಾಯ ವಾಗಬಹುದು. ಆತ್ಮನ ಏಕತ್ವವನ್ನು ಕಂಡು ಕೊಂಡ ಬಳಿಕ, ಈ ರೀತಿಯಾದ ಸೋಹಮ್ ವಿಚಾರ ಅರ್ಥ ಹೀನ ವಾಗಿ ಬಿಡುತ್ತದೆ. ನಾನು ಮನುಷ್ಯ ನಾನು ಮನುಷ್ಯ ಎಂದು ಪದೇ ಪದೇ ಹೇಳಿಕೊಳ್ಳುವ ಸ್ಥಿತಿ ಅರ್ಥಹೀನ,ಮೂಢತನ ಅಲ್ಲವೇ!

द्वैतं विचारे परमार्थबोधे त्वद्वैतमित्येष न साधुवादः।
गवेषणात्प्राग्दशमे विनष्टे पश्चाच्च लब्धे दशमत्वमेकम् ॥
३७ ॥
ದ್ವೈತಂ ವಿಚಾರೇ ಪರಮಾರ್ಥಬೋಧೇ
ತ್ವದ್ವೈತಮಿತ್ಯೇಷ ನ ಸಾಧುವಾದಃ|
ಗವೇಷಣಾತ್ಪ್ರಾಗ್ದಶಮೇ ವಿನಷ್ಟೇ
ಪಶ್ಚಾಚ್ಚ ಲಬ್ಧೇ ದಶಮತ್ವಮೇಕಮ್ || ೩೭ ||

ಎಲ್ಲಿಯವರೆಗೆ ದ್ವೈತಭಾವ ಇರುವುದೋ ಅಲ್ಲಿಯವರೆಗೆ ನಾವು ಅಜ್ಞಾನಿಗಳು ಮತ್ತು ಜ್ಞಾನ ಬಂದಕೂಡಲೇ ನಾವು ಅದ್ವೈತಿಗಳು ಎಂಬ

ಭಾವನೆ ಬಹಳ ತಪ್ಪು ಮತ್ತು ಅಸಮಂಜಸ. ಹತ್ತು ಜನರ ಗುಂಪಿನಲ್ಲಿ ಎಲ್ಲರನ್ನೂ ಎಣಿಸುವಾಗ, ಹತ್ತನೆಯವ ತಮ್ಮಲ್ಲೇ ಇದ್ದರೂ ಇಲ್ಲವೆಂದು ಹುಡುಕುತ್ತಿರುವಂತೆ ಆಗಿಬಿಡುತ್ತದೆ.

करोमि कर्मेति नरो विजानन् बाध्यो भवेत्कर्मफलं च भोक्तुम्।
विचारधूता हृदि कर्तृता चेत् कर्मत्रयं नश्यति सैव मुक्तिः ॥ ३८ ॥
ಕರೋಮಿ ಕರ್ಮೇತಿ ನರೋ ವಿಜಾನನ್
ಬಾಧ್ಯೋ ಭವೇತ್ಕರ್ಮಫಲಂ ಚ ಭೋಕ್ತುಮ್|
ವಿಚಾರಧೂತಾ ಹೃದಿ ಕರ್ತೃತಾ ಚೇತ್
ಕರ್ಮತ್ರಯಂ ನಶ್ಯತಿ ಸೈವ ಮುಕ್ತಿಃ || ೩೮ ||

ನಾನೇ ಎಲ್ಲ ಕಾರ್ಯಗಳನ್ನು ಮಾಡುವವ ಎಂದು ಆಲೋಚಿಸುವವ, ಆಯಾಯ ಫಲಭೋಗದಲ್ಲಿ ಬಂಧಿತನಾಗಿಬಿಡುತ್ತಾನೆ. ಈ ರೀತಿ ಕಾರ್ಯ ಕಾರಣ ಸಂಬಂಧ, ಜನ್ಯ ಜನಕ ಸಂಬಂಧಗಳಲ್ಲಿ ಮುಳುಗಿರುವವ, ಆತ್ಮ ವಿಚಾರವನ್ನು ಕೂಲಂಕಶವಾಗಿ ಪರಿಶೀಲಿಸಿದಾಗ ತನ್ನ ಭೋಕ್ತೃತ್ವ ಕತೃತ್ವ ಎಲ್ಲವೂ ನಾಶವಾಗಿ ತನ್ನ ಎಲ್ಲ ಕರ್ಮಗಳು ನಷ್ಟವಾಗಿ, ತನ್ನ ಪೂರ್ಣ ಸ್ವರೂಪದಲ್ಲಿ ತಾನು ನಿಲ್ಲುವುದೇ ಮೋಕ್ಷ. ಇದೇ ಆನಂದ ಮತ್ತು ಬಿಡುಗಡೆ ಎಂಬುದು ಶುದ್ಧ ಸತ್ಯ ಸಂಗತಿ.

बद्धत्वभावे सति मोक्षचिन्ता बन्धस्तु कस्येति विचारणेन।
सिद्धे स्वयं स्वात्मनि नित्यमुक्ते क्वबन्धचिन्ता क्व च मोक्षचिन्ता॥ ३९ ಬದ್ಧತ್ವಭಾವೇ ಸತಿ ಮೋಕ್ಷಚಿನ್ತಾ
ಬನ್ಧಸ್ತು ಕಸ್ಯೇತಿ ವಿಚಾರಣೇನ|
ಸಿದ್ಧೇ ಸ್ವಯಂ ಸ್ವಾತ್ಮನಿ ನಿತ್ಯಮುಕ್ತೇ
ಕ್ವ ಬನ್ಧಚಿನ್ತಾ ಕ್ವ ಚ ಮೋಕ್ಷಚಿನ್ತಾ || ೩೯ ||

ಎಲ್ಲಿಯವರೆಗೆ ಬಂಧನದ ಭೀತಿ ಇರುವುದೋ, ಅಲ್ಲಿಯವರೆಗೆ,ಅದರ ವಿಮೊಚನೆಯೂ ಕಾಡುತ್ತಿರುತ್ತದೆ. ಯಾರಿಗೆ ಈ ಬಂಧನ ಎಂದು ವಿಚಾರಮಾಡಿದ ಕೂಡಲೇ ಆತ್ಮದರ್ಶನಕ್ಕೆ ದಾರಿಯಾಗುತ್ತದೆ. ನೀವೇ ನಿತ್ಯ ಶುದ್ಧ ಮತ್ತು ಆತ್ಮ ವಾಗಿರುವಾಗ ಎಲ್ಲಿಯ ಬಂಧನ ಎಲ್ಲಿಯ ಭೀತಿ?

रूपिण्यरूपिण्युभयात्मिका च मुक्तिस्त्रिरूपेति विदो वदन्ति।
इदं त्रयं या विविनक्त्यहन्धी स्तस्याः प्रणाशः परमार्थमुक्तिः ॥४०॥

ರೂಪಿಣ್ಯರೂಪಿಣ್ಯುಭಯಾತ್ಮಿಕಾ ಚ
ಮುಕ್ತಿಸ್ತ್ರಿರೂಪೇತಿ ವಿದೋ ವದನ್ತಿ|
ಇದಂ ತ್ರಯಂ ಯಾ ವಿವಿನಕ್ತ್ಯಹನ್ಧೀ -
ಸ್ತಸ್ಯಾಃ ಪ್ರಣಾಶಃ ಪರಮಾರ್ಥಮುಕ್ತಿಃ ॥೪೦॥

ಜ್ಞಾನಿಗಳು ಮತ್ತು ಸಂತರ ಪ್ರಕಾರ, ಮುಕ್ತಿಯು ಮೂರು ಬಗೆ.
1. ಜೀವನ್ಮುಕ್ತಿ 2. ವಿದೇಹ ಮುಕ್ತಿ 3. ದೇಹ ಇದ್ದೂ ಇರದಂತಹ ಮುಕ್ತಿ. ಅಹಂಕಾರ ಇರುವವರೆಗೆ ಇವು ಮೂರು ಅವಸ್ಥೆಗಳಾಗಿ ತಿಳಿಯುತ್ತಿರುತ್ತದೆ. ಅಹಂಕಾರದಿಂದ ಬಂದ ಈ ಮೂರು ಅವಸ್ಥೆಗಳು, ಅಹಂಕಾರ ನಾಶವಾದಾಗ ,ಪೂರ್ಣ ಸತ್ ದರ್ಶನ ಆಗುತ್ತದೆ.

सद्दर्शनं द्राविडवाङ्निबद्धं महर्षिणा श्रीरमणेन शुद्धम्।
प्रबन्धमुत्कृष्टममर्त्यवाण्या मनूद्य वासिष्ठमुनिर्व्यतानीत्
॥ ४१ ॥

ಸದ್ದರ್ಶನಂ ದ್ರಾವಿಡವಾಙ್ನಿಬದ್ಧಂ
ಮಹರ್ಷಿಣಾ ಶ್ರೀರಮಣೇನ ಶುದ್ಧಮ್|
ಪ್ರಬನ್ಧಮುತ್ಕೃಷ್ಟಮಮರ್ತ್ಯವಾಣ್ಯಾ -
ಮನೂದ್ಯ ವಾಸಿಷ್ಠಮುನಿರ್ವ್ಯತಾನೀತ್ ॥ ೪೧ ॥

ರಮಣಮಹರ್ಷಿಗಳ ಈ ವಾಣಿಯು ಒಂದು ದೀಪದ ಪ್ರಜ್ವಲನೆಯಂತೆ ಎಲ್ಲ ಕಡೆಗೂ ಬೆಳಗುತ್ತಿರುವ ಜ್ಞಾನ ಸ್ವರೂಪವನ್ನು ಬಿಂಬಿಸುತ್ತಿದೆ. ಆತ್ಮ ಸಾಕ್ಷಾತ್ಕಾರಕ್ಕೆ ದಾರಿ ದೀಪವಾಗಿ ಬೆಳಗುತ್ತಿದೆ. ಅದ್ದರಿಂದ ಮಹರ್ಷಿಗಳ ದಿವ್ಯ ತೇಜೋಮುಖದಿಂದ ಹೊರಟುಬಂದ ಈ ನಲವತ್ತು ಪದ್ಯಗಳು ಬಹಳ ಉತ್ಕೃಷ್ಟವಾದ ಪದ್ಯಗಳು.

सत्तत्वसारं सरलं दधाना मुमुक्षुलोकाय मुदं ददाना।
अमानुषश्रीरमणीयवाणी मयूखभित्तिर्मुनिवाग्विभाति ॥ ४२ ॥

ಸತ್ತತ್ತ್ವಸಾರಂ ಸರಲಂ ದಧಾನಾ
ಮುಮುಕ್ಷುಲೋಕಾಯ ಮುದಂ ದದಾನಾ|
ಅಮಾನುಷಶ್ರೀರಮಣೀಯವಾಣೀ -
ಮಯೂಖಭಿತ್ತಿರ್ಮುನಿವಾಗ್ವಿಭಾತಿ || ೪೨ ||

ಎಲ್ಲೆಡೆ, ಬೆಳಕಿನ ಪರದೆಯಂತೆ ಹರಡಿರುವ ಶ್ರೀ ರಮಣ ಮಹರ್ಶಿಗಳ ಈ ದಿವ್ಯ ವಾಣಿಯು ಮನಸ್ಸಿಗೆ ಮುದ ನೀಡುವ ಸತ್ ಸ್ವರೂಪದ ಸರಳ ನಿರೂಪಣೆಯಾಗಿದೆ

...............................

# ಉಪದೇಶ ಸಾರ

## ಶ್ರೀ ರಮಣ ಮಹರ್ಷಿ

ಕನ್ನಡ ಭಾವಾನುವಾದ
ರಾಧಾಕೃಷ್ಣನ್ ಗರಣಿ

(ಖಾಸಗಿ ಹಂಚಿಕೆಗಾಗಿ ಸೀಮಿತ)



ಈಶ್ವರೋ ಗುರುರಾತ್ಮೇತಿ ಮೂರ್ತಿ ಭೇದ  ವಿಭಾಜಿನೇ
ವ್ಯೋಮವತ್ ವ್ಯಾಪ್ತ ದೇಹಾಯ ದಕ್ಷಿಣಾಮೂರ್ತಯೇ ನಮಃ
ईश्वरो गुरुरात्मेति मूर्ति भेद  विभाजिने
व्योमवत् व्याप्त देहाय दक्शिणामूर्तये नमः

ದಕ್ಷಿಣಾಮುರ್ತಿ ಸ್ವರೂಪ ರಮಣ ಮಹರ್ಷಿಯೇ ನಮಃ
दक्षिणामुर्ति स्वरूप रमण महर्षिये नमः

# ಉಪದೇಶ ಸಾರ

ಶ್ರೀ ರಮಣ ಮಹರ್ಷಿಗಳ ಭಕ್ತರೊಬ್ಬರಾದ ಶ್ರೀ ಮುರುಗನಾರ್ ಎಂಬುವರು ಮಹಾನ್ ಕವಿಯಾಗಿದದ್ದರು. ಇವರು ತಮಿಳು ಭಾಷೆಯಲ್ಲಿ "ಶಿವಲೀಲೆ" ಎಂಬ ನೂರು ಪದ್ಯಗಳನ್ನು ಒಳಗೊಂಡ ಕಾವ್ಯವನ್ನು ಬರೆಯುತ್ತಿದ್ದರು. ಅದರಲ್ಲಿ ದಂಡಕಾರಣ್ಯ ವನದಲ್ಲಿ ವಾಸಿಸುತ್ತಿದ್ದ ಋಷಿಮುನಿಗಳಿಗೆ. ಪರಮೇಶ್ವರನು ಉಪದೇಶಿಸಿದ್ದ ವೇದಾಂತದ ಜ್ಞಾನದ ಬಗ್ಗೆ ಬರೆಯಬೇಕಿತ್ತು. ತನ್ನ ಮನಸ್ಸಿಗೆ ಈ ವೇದಾಂತ ಜ್ಞಾನ ಎಟುಕದ ವಸ್ತುವಾದ್ದರಿಂದ, ಶ್ರೀ ರಮಣರ ಮೊರೆ ಹೊಕ್ಕಾಗ ರಮಣರು, ಅವರ ಇಚ್ಛೆಯನ್ನು ಪೂರೈಸಲು ಮೂವತ್ತು ಚಿಕ್ಕ ಪದ್ಯಗಳಲ್ಲಿ ಉಪದೇಶ ಉಂದ್ರಿಯರ್ ಎಂದು ತಮಿಳು ಭಾಷೆಯಲ್ಲಿ ಬರೆದುಕೊಟ್ಟರು. ನಂತರದಲ್ಲಿ ಮಹರ್ಷಿಗಳೇ ಅದರ ತರ್ಜುಮೆಯನ್ನು ಸಂಸ್ಕೃತ ಮತ್ತು ಮಲೆಯಾಳಂ ಭಾಷಗೆ ಮಾಡಿ ಅದಕ್ಕೆ ಅನುಭೂತಿ ಸಾರ ಎಂದು ಹೆಸರಿಟ್ಟಿದ್ದರು. ನಂತರ ಅವರೇ ಅದನ್ನು ಉಪದೇಶ ಸಾರ ಎಂದು ಕರೆದರು. ಈ ಪದ್ಯಗಳನ್ನು ಇಂದಿಗೂ ರಮಣಾಶ್ರಮದಲ್ಲಿ ಪೂಜೆಯ ವೇಳೆಯಲ್ಲಿ ವಾಡಿಕೆಯಾಗಿ ಸಲ್ಲಿಸುತ್ತಾರೆ.

ಈ ಪದ್ಯಗಳು ಪರಮೇಶ್ವರನು ಋಷಿಮುನಿಗಳಿಗೆ ಉಪದೇಶಿಸಿದ್ದ ಮೊಕ್ಷ ವಿದ್ಯೆ. ಕರ್ಮದ ಆಚರಣೆಗಿಂತ ಜ್ಞಾನಮಾರ್ಗವೇ ಮೋಕ್ಷಕ್ಕೆ ಸಾಧನ ಎಂಬುದೇ ಅದರ ಸಂದೇಶ. ಸಾಧನಾ ಪಥದಲ್ಲಿರುವ ಎಲ್ಲರಿಗೂ ಈ ಸರಳವಾದ ಮತ್ತು ಗಹನವಾದ ಚಿಕ್ಕ ಚಿಕ್ಕ ಸೂತ್ರಗಳು

ಅರ್ಥ ಗರ್ಭಿತವಾಗಿದೆ. ಇದರಲ್ಲಿ ವೇದಾಂತದ ಸಾರವನ್ನೇಲ್ಲಾ ಮಹರ್ಷಿಗಳು ಅಡಕ ಮಾಡಿದ್ದಾರೆ. ಅತ್ಯಂತ ಗಹನವಾದ ಅವರ ಮೊದಲ ಉಳ್ಳದು ನಾರ್ಪದು(ಸತ್ ದರ್ಶನ) ಕೃತಿಗೆ ಪೂರಕವಾದ ಇವು ಸಾಧನೆಯ ಸೂಕ್ಷ್ಮತೆಯನ್ನು ಎತ್ತಿ ಹಿಡಿಯುತ್ತವೆ.

ಸಾಧಕನ ಮನನಕ್ಕೆ ಉಪಯುಕ್ತವಾದ ಈ ಮೂವತ್ತು ಪದ್ಯಗಳಲ್ಲಿ ರಮಣ ಮಹರ್ಷಿಗಳು ಮೊದಲು ಐದು ಪದ್ಯಗಳಲ್ಲಿಯೇ ತಮ್ಮ ಮೂಲ ಸಿದ್ಧಾಂತವನ್ನು ಬಹಳ ಕ್ಲಿಷ್ಟಕರವಾದ ಸಣ್ಣ ಸಣ್ಣ ಸೂತ್ರಗಳಲ್ಲಿ ಮಂಡಿಸಿದ್ದಾರೆ. ಕರ್ಮದ ಉದ್ದೇಶ ಮತ್ತು ಅದರ ನಿರರ್ಥಕತೆಯ ಬಗ್ಗೆ ಚರ್ಚೆ ಮಾಡಿ, ನಮ್ಮೆಲ್ಲರ ತಿಳುವಳಿಕೆಯ ದಾರಿ,ತಪ್ಪು ಎಂದು ಮನದಟ್ಟು ಮಾಡಿದ್ದಾರೆ. ಆದ್ದರಿಂದ, ನಾವು ಈ ಕರ್ಮಗಳ ಆಚರಣೆಗಿಂತ ಜ್ಞಾನ, ಮತ್ತು ವಿಚಾರ ಮಾರ್ಗದಲ್ಲಿ, ತೊಡಗಿಸಿಕೊಂಡಾಗ,ಅದು ನಮ್ಮನ್ನು ಸತ್ ದರ್ಶನದ ಕಡೆಗೆ ದಾರಿ ದೀಪವಾಗುವುದು,ಎನ್ನುತ್ತಾರೆ ಮಹರ್ಷಿಗಳು.

ನಮಲ್ಲಿ ಸದಾ ನಡೆಯುತ್ತಿರುವ ಅಹಂ ಸ್ಪುರಣವೇ, ಬಚ್ಚ ಬರಿಯ ಅರಿವೇ ಹೊರತು, ಬೇರೆ ಯಾವ ನಾನು ಎಂಬ ವಸ್ತುವೇ ಇಲ್ಲವೇ ಇಲ್ಲ ಎಂದು ನಿಖರವಾಗಿ ತೋರಿಸಿದ್ದಾರೆ. ಇದಕ್ಕೆ ಜ್ಞಾನದ ಮಾರ್ಗವನ್ನು ನಾವು ಬಳಸಿಕೊಂಡಾಗ ಅದರ ಆನಂದದಿಂದ ನಮಗೆ ಸತ್ಯವು ಗೋಚರ ವಾಗುತ್ತದೆ. ಸಾಧಕರು, ಈ ಎಡರು ತೊಡರುಗಳನ್ನು ಗುರುತಿಸಿ ಅವುಗಳನ್ನು ದಾಟುವುದೇ ಮುಖ್ಯ ಗುರಿಯಾಗಿಸಿಕೊಳ್ಳಬೇಕು..

ಮಹರ್ಷಿಗಳ ವಾಣಿಯ ಮೊದಲ ಪದ್ಯದ ಪದಗಳು, ಕರ್ತೃ,ಕರ್ಮ, ಕರ್ಮಫಲ, ಅದರ ಆಶಾಶ್ವತೆ, ಜಡ ಸ್ವರೂಪ, ಇವುಗಳೆಲ್ಲವೂ ಅರ್ಥಗರ್ಭಿತವಾದ ಸಣ್ಣ ಪದಗಳಾದರೂ ಮತ್ತು ಸರಳವಾಗಿ ಕಂಡರೂ,ಇವೆಲ್ಲಾ ನಮ್ಮನ್ನು ಆಳವಾದ ಚಿಂತನೆಗೆ ಒಯ್ಯುತ್ತದೆ.

ಪಂಚಭೂತಗಳ ಸಂಯೋಗದ ಈ ದೇಹ, ಇಂದ್ರಿಯಗಳು, ಮನಸ್ಸು ಬುದ್ಧಿಗಳೇ ಈ 'ನಾನು' ಎಂದು ನಾವೆಲ್ಲಾ ತಿಳಿದಿದ್ದೇವೆ. ಇದರಿಂದ ನಾವು ಎಲ್ಲಾ ತರಹದ ಸುಖಗಳನ್ನು ಪಡೆಯಬಹುದೆಂದು ನಂಬಿದ್ದೇವೆ. ಆದರೆ, ಇದರ ಹಿಂದೆ ಇರುವ ಸೂಕ್ಷ್ಮ ಶಕ್ತಿಯೇ ಎಲ್ಲ, ಸ್ಥೂಲಶರೀರ, ಸೂಕ್ಷ್ಮಶರೀರಗಳ ಪಂಚೇಂದ್ರಿಯದ ತನ್ಮಾತ್ರೆಗಳು (ಶಬ್ದಸ್ಪರ್ಶ ರೂಪ ರಸ ಗಂಧ), ಮತ್ತು ಚಿತ್ತ, (ನಮ್ಮೆಲ್ಲರ ಆಗು ಹೋಗುಗಳಮೂಟೆ)ಗಳನ್ನು ನಿಯಂತ್ರಣ ಮಾಡುತ್ತಿರುವುದೇ ನಮ್ಮ ಮೂಲಶಕ್ತಿಯ ಸ್ವರೂಪ ಎಂಬುದನ್ನು ಮರೆತಿದ್ದೇವೆ. ಇದರ ಕಾರಣದಿಂದ ಈ ಜ್ಞಾನಶಕ್ತಿಯೇ ಇಚ್ಛಾಶಕ್ತಿಯಾಗಿ ಪರಿವರ್ತಿಸಿಕೊಂಡು ಕರ್ತೃವಿನ ರೂಪದಲ್ಲಿ ತಲೆದೋರುತ್ತದೆ. ಇದರಿಂದ ಕರ್ಮ ಪ್ರೇರೇಪಣೆಯಾಗುತ್ತದೆ. ಈ ರೀತಿ ಆದು ಕರ್ತೃವಿನ ಆಜ್ಞೆಯಾಗುತ್ತದೆ. ಜೀವನದಲ್ಲಿ ಏಲ್ಲರೂ ಸುಖ ಶಾಂತಿಗಾಗಿ ಎಲ್ಲೆಡೆ ಅರಸಿ ಹೋಗುತ್ತಾರೆ..ಒಳ್ಳೆಯ ತಿಂಡಿಯ ಆಸ್ವಾದನೆಯ ಸುಖ, ಒಳ್ಳೆಯ ಸಂಗಾತಿಯ ಸುಖ, ಒಂದು ಉತ್ಕೃಷ್ಟವಾದ ಕಾರ್ಯದಿಂದ ದೊರೆಕುವ ಸುಖ ಮುಂತಾದುವೆಲ್ಲ ನಮಗೆ ಆನಂದ ಮತ್ತು ಮುದ ತರುತ್ತದೆಂಬುದು ನಮ್ಮ ಅನಿಸಿಕೆ. ಆದರೆ ಈ ಸುಖದ ಆನಂದ, ಮತ್ತಷ್ಟು ಕಾರ್ಯಗಳಲ್ಲಿ ತೊಡಗಿಸಿ ಮತ್ತಷ್ಟು ಹೆಚ್ಚು ಹೆಚ್ಚು ಕರ್ಮಗಳಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಣೆ ಮಾಡಿ ಬಹಳ ದುಃಖದ ಕಡೆ ನಮ್ಮನ್ನು ದೂಡುತ್ತದೆ. ಇದರಿಂದ ಉತ್ಪಾದನೆಗೊಂಡ ದುರ್ಭರ ಶಕ್ತಿಗಳು, ಒಂದು ರೀತಿಯ ಸಂಕುಚಿತ ಭಾವನೆಗೆ ಒಳಗಾಗಿ, ನಮ್ಮನ್ನು ತಮೋಗುಣದತ್ತ ತಳ್ಳುತ್ತದೆ. ತಮೋಗುಣ ಪ್ರಧಾನವಾದ ಈ ಕರ್ಮಗಳೆಲ್ಲವೂ ಜಡತ್ವಕ್ಕೆ ದಾರಿಯಾಗುತ್ತದೆ.

ಇದೇ ಬೇಜಾರು ಅಥವಾ ಆಂಗ್ಲಭಾಷೆಯ ಬೋರ್ಡಮ್ ಎಂದು ಕರೆಯಲ್ಪಡುತ್ತದೆ. ನಮ್ಮ ಮೂಲಾಧಾರದಲ್ಲಿ ಉತ್ಪತ್ತಿಯಾದ ಈ ಶಕ್ತಿ ಆಜ್ಞಾ ಸ್ಥಾನದಲ್ಲಿ ಕೊನೆಗೊಂಡಾಗ ಇದರ ಪರಿಣಾಮವಾಗಿ, ಒತ್ತಡ

ಬಹಳವಾಗುತ್ತದೆ. ಅದದಿಂದ ಹೊರಬರಲು ಮತ್ತೆ ನಾವು, ಒಂದು ಗಾಳಿಯ ವಿಹಾರಕ್ಕೋ, ಸಂಗೀತವನ್ನು ಆಲಿಸುವುದರಿಂದಲೋ,ಒಂದು ಚಿತ್ರವನ್ನು ನೋಡುವುದರಿಂದಲೋ, ಒಳ್ಳೆಯ ತಿಂಡಿ ಅಥವಾ ಪಾನೀಯವನ್ನು ಸವಿಯುವುದರಿಂದಲೋ), ಆ ದುರ್ಭರ ಶಕ್ತಿಗಳನ್ನು ವ್ಯಯಮಾಡಿದಾಗ, ನಮ್ಮ ಸಂಕುಚಿತವಾದ ಮನಸ್ಸು ಆ ಭಾವನೆಯಿಂದ ನಮ್ಮನ್ನು ವಿಶ್ರಾಂತಿಯ ಕಡೆಗೆ ಹೊರಳಿಸುತ್ತದೆ. ಇದು ಸ್ವಾಭಾವಿಕವಾಗಿ ಆಗುವ ಕ್ರಿಯೆ.. ಇದಕ್ಕೆ ಶಕ್ತಿ ಪಲ್ಲಟನಾ ಕ್ರಮ ಎನ್ನುತ್ತಾರೆ. ಆಂಗ್ಲಭಾಷೆಯಲ್ಲಿ ಇದಕ್ಕೆ ಎನರ್ಜಿ ಶಿಫ್ಟ್ ಮೆಖಾನಿಸಮ್ ಎನ್ನುತ್ತಾರೆ. ಆದರೆ ಇದರಿಂದ ದೊರೆತ ಆನಂದ, ಕ್ಷಣಿಕವಾದ್ದರಿಂದ ಮತ್ತೆ ಮತ್ತೆ ಕರ್ಮಕ್ಕೆ ದಾರಿ ಮಾಡಿ ಮಾಡಿಕೊಡುತ್ತದೆ. ನಾವು ಕರ್ಮಚಕ್ರದಲ್ಲಿ ಮತ್ತೆ ತಿರುಗಿ ,ದುಃಖದಿಂದ ತೊಳಲುತ್ತೇವೆ.

ಆದರೆ, ಈ ರೀತಿಯಾದ ಒಂದು ವ್ಯವಸ್ಥೆ ಮನುಷ್ಯನಲ್ಲಿ ಇರುವುದರಿಂದಲೇ ಇಂತಹ ಭಾದೆಗಳಿಂದ ಆಗಾಗ ಹೊರ ಬರುವುದರಿಂದ, ನಾವು ಒತ್ತಡದಿಂದ ಸರಿಯುತ್ತಾ ಇರುತ್ತೇವೆ. ಇವೆಲ್ಲವೂ ಮನಸ್ಸಿನಲ್ಲಿ ಆಗುವ ವೇಗ ಮತ್ತು ಸಂಕುಚಿತ ಭಾವನೆಗಳು. ನಾವು ಇವನ್ನು ತೊರೆದು, ನೈಧಾನ್ಯ ಮತ್ತು ವೈರಾಗ್ಯದ ಕಡೆ (ಉದಾಸೀನಭಾವ) ಮನಸ್ಸನ್ನು ತಿರುಗಿಸದಾಗ ಅದು ವೈಶಾಲ್ಯದ ಕಡೆಗೆ ತಿರುಗಿ ಜೀವನದಲ್ಲಿ ಏನೇ ಕಷ್ಟಕರ ಸನ್ನಿವೇಶ ಬಂದರೂ ಬಹಳ ಸರಳವಾಗಿ ಎದುರಿಸಬಹುದಾದ ಸನ್ನಿವೇಶ ಒದಗುತ್ತದೆ. ಈ ರೀತಿ ನಮಗೆ ಆನಂದವನ್ನು ತರುವಂತಹ ಸ್ಥಿತಿಯನ್ನು ನಾವು ಹೆಚ್ಚು ಹೆಚ್ಚು ಸಮಯ ಅನುಭವಿಸುವ ಒಂದು ನೆಲೆಯನ್ನು ಸಂಪಾದಿಸಿಕೊಳ್ಳಬೇಕು. ಇದಕ್ಕೆ ಉದಾಸೀನ ಭಾವ ಅಥವಾ ಸಾಕ್ಷಿ ಭಾವ ಎನ್ನುತ್ತಾರೆ.

ಮನಸ್ಸೇ ನಮ್ಮ ಸುಖ ದುಃಖಕ್ಕೆ ಮತ್ತು ಆದರ ಬಿಡುಗಡೆಗೆ ಕಾರಣವಾದ್ದರಿಂದ, ಅದರ ಆಳಕ್ಕೆ ಇಳಿದು ದೀರ್ಘ ಚಿಂತನೆಯ ದಾರಿಯತ್ತ ಸಾಗಬೇಕು. ಮನಸ್ಸಿಗಿಂತ ಅತ್ಯಂತ ವೇಗವಾದ ವಸ್ತು ಮತ್ತೊಂದಿಲ್ಲ. ನಮ್ಮ ದೇಹ ಮತ್ತು ಇಂದ್ರಿಯಗಳು ವೇಗ ಮತ್ತು ಸಂಕುಚಿತೆಯಲ್ಲಿ ಇದ್ದರೂ, ಮನಸ್ಸು ನೈಧಾನ್ಯ ಮತ್ತು ಉದಾಸೀನತೆಯಲ್ಲಿ ಇದ್ದಾಗ, ವೇಗವನ್ನು ತಡೆಯಬಲ್ಲ ಶಕ್ತಿ ದೊರಕತ್ತದೆ. ಇದರಿಂದ ವೈಶಾಲತೆ ಬೆಳೆದು,ಅಮನೀಭಾವ ಉಂಟಾಗುತ್ತದೆ. ಇದನ್ನು ನಾವು ಹೆಚ್ಚು ಹೆಚ್ಚು ಬೆಳೆಸಿ ಕೊಳ್ಳಬೇಕು.

ನಮ್ಮ ಮೂಲ ಉದ್ದೇಶ ವಾಸನಾಕ್ಷಯದತ್ತ ಸಾಗಬೇಕು. ಇದು ಅಭ್ಯಾಸ ಮತ್ತು ವೈರಾಗ್ಯದಿಂದಲೇ ಸಾಧ್ಯ. ಆಭ್ಯಾಸ ಎಂದರೆ ನಮ್ಮ ಮೂಲ ಸ್ವರೂಪದ ಚಿಂತನೆಯಲ್ಲೇ ಸಹಜ ಸ್ಥಿತಿಯಲ್ಲಿ ನಿಲ್ಲುವುದಕ್ಕೆ ಪ್ರಯತ್ನ ಮಾಡಬೇಕು. ನಮ್ಮೆಲ್ಲ ಮೈಯ್ಯನ್ನು ಕಣ್ಣಾಗಿಸಿ,, ಎಚ್ಚರಿಕೆಯಿಂದ ನೋಡುತ್ತಾ ಆ ದೃಶ್ಯಗಳಲ್ಲಿ ತೊಡಗಿಸಿಕೊಳ್ಳದೆ, ಬರಿಯ ವೀಕ್ಷಕನಾಗಿ ನಿಲ್ಲುವುದನ್ನು ಅಭ್ಯಾಸಮಾಡಬೇಕು. ಇದು ಹಂತ ಹಂತ ದಲ್ಲಿ ಸಾಗುವುದರಿಂದ, ಸಮತ್ವದಲ್ಲಿ ಮನಸ್ಸನ್ನು ಇರಿಸಿದರೆ ಬಹಳ ಉತ್ತಮ. ವೈರಾಗ್ಯ ಎಂದರೆ ಅನಾಸಕ್ತಿಭಾವ. ಎಲ್ಲವನ್ನು ತ್ಯಜಿಸಿಬಿಟ್ಟರೆ ನನ್ನ ಗತಿ ಏನು ಎಂಬ ತಪ್ಪು ಭಾವನೆಯಿಂದ ಹೊರ ಬರಬೇಕು. ಎಲ್ಲ ರೀತಿಯ ದ್ವಂದ್ವಗಳಾದ, ಸುಖ ದುಃಖ, ಆಸೆ ನಿರಾಸೆ, ರಾಗದ್ವೇಷ, ಅಸೂಯೆ, ಮುಂತಾದ ಆರು ಶತ್ರುಗಳನ್ನು(ಕಾಮ,ಕ್ರೋಧ,ಲೋಭ,ಮೋಹ, ಮದ ಮತ್ತು ಮಾತ್ಸರ್ಯ) ಹತೋಟಿಯಲ್ಲಿ ತಂದಾಗ, ಅವು ಒಂದೊಂದೇ ಬಿದ್ದುಹೋಗಿ ವಾಸನೆಗಳ ಮೂಟೆ ಕರಗಲು ಉಪಕಾರಿ ಯಾಗುತ್ತದೆ. ಎಲ್ಲ ಆಗು ಹೋಗುಗಳನ್ನು ಸಮತಾ ಭಾವದಿಂದ ನೋಡಿದಾಗ, ನಮ್ಮ ಮನಸ್ಸಿನ ಹೊಯ್ದಾಟ ಕಡಿಮೆಯಾಗಿ ಮನೋನಾಶಕ್ಕೆ ದಾರಿ ಮಾಡಿ ಕೊಡುತ್ತದೆ. ಇದರಿಂದ ಅಮನೀಭಾವದತ್ತ ನಮ್ಮಗತಿ ನಿಧಾನವಾಗಿ ಸಾಗುತ್ತದೆ. ವಾಸನಾಕ್ಷಯ, ಮನೋನಾಶ ಮತ್ತು

ಆತ್ಮ ಬೋಧಗಳೆಲ್ಲವೂ ಒಂದಕ್ಕೊಂದು ಪೂರಕವಾದ್ದರಿಂದ ಯಾವ ಒಂದು ಪ್ರಕ್ರಿಯೆಗೆ ಒತ್ತುಕೊಟ್ಟರೂ, ಅದು ನಮ್ಮನ್ನು ಮೂಲ ಸ್ವರೂಪಕ್ಕೆ ಒಯ್ಯುತ್ತದೆ.

ಇವನ್ನು ಕರಗತ ಮಾಡಿ ಅನುಭವಕ್ಕೆ ತಂದುಕೊಂಡಾಗಲೇ ನಮಗೆ ಆತ್ಯಂತಿಕ ಸುಖ ಮತ್ತು ಆನಂದ ಲಭಿಸುತ್ತದೆ. ಇದನ್ನು ಪದಗಳಲ್ಲೇ ಆಗಲೀ. ಅಥವಾ ಮಾತುಗಳಿಂದಾಗಲೀ ಹೇಳುವುದು ಅಸಾಧ್ಯ. ಇದನ್ನು ಸ್ವಂತ ಆನುಭವಾದಲ್ಲಿ ತಂದಾಗಲೇ ಅದರ ಮಹತ್ವ ಅರಿವಾಗುತ್ತದೆ.

ಇದಕ್ಕೇ, ಮಹರ್ಷಿಗಳು, ಸಮುದ್ರದ ಅಲೆಗಳು ಏಳುವ ಬೀಳುವ ಮತ್ತು ಅದರ ಉತ್ಪತ್ತಿ ಮತ್ತು ನಾಶದ ಬಗ್ಗೆ ಉದಾಹರಿಸಿ, ಕರ್ಮಫಲಗಳು ಶಾಶ್ವತವಲ್ಲದ ಕಾರಣ, ಸಾಧಕನು,ಇದರಲ್ಲಿ ಆಸಕ್ತಿ ತೋರಬಾರದು ಎಂಬ ಎಚ್ಚರಿಕೆ ಪದೇ ಪದೇ ನೀಡುತ್ತಿದ್ದಾರೆ. ಇವೆಲ್ಲವನ್ನೂ ಅವರು ತಮ್ಮ ಐದು ಪದಗಳಾದ ಕರ್ತೃ ಕರ್ಮ ಕರ್ಮಫಲ ಜಡ ಮತ್ತು ಆಶಾಶ್ವತೆಯಲ್ಲಿ ತುಂಬಿದ್ದಾರೆ. ಆದ್ದರಿಂದ ಎಷ್ಟೇ ವಿಧವಾದ ಕರ್ಮದ ಆಚರಣೆಯಲ್ಲಿ ನಮ್ಮನ್ನು ತೊಡಗಿಸಿ ಕೊಂಡರೂ, ಅದು ನಮ್ಮ ಚಿತ್ತಶುದ್ಧಿಗೆ ಕಾರಣವೇ ಹೊರತು, ಆತ್ಯಂತಿಕ ಸುಖ ಮತ್ತು ಆನಂದವನ್ನು ಕೊಡಲಾರದು. ಸಾಧಕನು ಯಾವರೀತಿಯಲ್ಲಿ ಸಾಧನೆ ಮಾಡಿದರೆ, ಅವನನ್ನು ಮೂಲ ಸ್ವರೂಪಕ್ಕೆ ಕೊಂಡು ಒಯ್ಯುತ್ತದೆ ಎಂಬುವುದೇ ಉಪದೇಶ ಸಾರದ ತಿರುಳು.
ಮಹರ್ಷಿಗಳು ನಮ್ಮನ್ನು ಹಂತ ಹಂತವಾಗಿ ಕೆಳ ಮಟ್ಟದಿಂದ ಉನ್ನತವಾದ ಶಿಖರಕ್ಕೆ ಕೊಂಡೊಯ್ಯುತ್ತಾರೆ. ಇದನ್ನು ನಾವೆಲ್ಲರೂ ನಿತ್ಯ ಪಾರಾಯಣವಾಗಿ ಸ್ವೀಕರಿಸಿದಾಗ ,ನಮ್ಮ ಸಾಕ್ಷಾತ್ಕಾರದ ಮಾರ್ಗಕ್ಕೆ ದಾರಿದೀಪವಾಗಿ, ನಮ್ಮ ಜನ್ಮ ಸಾರ್ಥಕ ವಾಗುವುದರಲ್ಲಿ ಸಂದೇಹವೇ ಇಲ್ಲ.

ಕನ್ನಡ ಬರಹಕ್ಕೆ ಶ್ರೀ ರಮಣ ಮಹರ್ಷಿಗಳ ಕೃಪಾಕಟಾಕ್ಷ ಮತ್ತು ಶ್ರೀ ಬ್ರಹ್ಮಾನಂದರ ಪ್ರವಚನದ ಮಾಲಿಕೆಯನ್ನು ಆಧಾರವಾಗಿ ಇಟ್ಟುಕೊಂಡು ನನ್ನ ಬುದ್ಧಿಗೆ ಎಟುಕುವಷ್ಟು ಪ್ರಯತ್ನ ನಡೆಸಿದ್ದೇನೆ. ಸ್ವಾಮಿ ಬ್ರಹ್ಮಾನಂದರಿಗೆ ನಾನು ಆಭಾರಿಯಾಗಿದ್ದೇನೆ. ನನ್ನ ಅತ್ಮೀಯ ಸ್ನೇಹಿತರ ಪ್ರೇರಣೆ ಉತ್ತೇಜನ ಬಹಳ ಸಹಕಾರಿ ಆದದ್ದರಿಂದ, ಅವರಿಗೂ ನನ್ನ ವಂದನೆಗಳು.

कर्तुराज्ञया प्राप्यते फलम् ।
कर्म किं परं कर्म तज्जडम् ॥ १॥
ಕರ್ತುರಾಜ್ಞಯಾ ಪ್ರಾಪ್ಯತೇ ಫಲಮ್ |
ಕರ್ಮ ಕಿಂ ಪರಂ ಕರ್ಮ ತಜ್ಜಡಮ್ || ೧||

ಕರ್ತೃವಿನ(ಈಶ್ವರನ) ಆಪೇಕ್ಷಯ ಮೇರೆಗೆ ಕರ್ಮ ಮಾಡುವ ವನಿಗೆ ಕರ್ಮ ಫಲ ದೊರೆಯುತ್ತದೆ. ಅದರೆ ಅವೆರಡಕ್ಕೂ ಅದಿಯೂ ಅಂತ್ಯವೂ. ಇರುವುದರಿಂದ ಅದು ಆತ್ಯಂತಿಕ ಸುಖವನ್ನು ಕೊಡಲಾರದು. ಎಂತಹ ಕರ್ಮಗಳನ್ನು (ಪೂಜೆ, ಭಜನೆ ಮುಂತಾದವು) ಮಾಡಿದರೂ ಆ ಫಲಗಳಲ್ಲಿ ದೊರೆತ ಸುಖ ಕ್ಷಣಿಕವಾದದ್ದು ಮತ್ತು ಶಾಶ್ವತವಲ್ಲದ್ದು. ಅದ್ದರಿಂದ ಕರ್ಮ ಜಡವಾದ್ದರಿಂದ ಶಾಶ್ವತ ಸುಖ ಪಡೆಯಲು ಸಾಧ್ಯವಿಲ್ಲ.

कृतिमहोदधौ पतनकारणम् ।
फलमशाश्वतं गतिनिरोधकम् ॥ २॥
ಕೃತಿಮಹೋದಧೌ ಪತನಕಾರಣಮ್ |
ಫಲಮಶಾಶ್ವತಂ ಗತಿನಿರೋಧಕಮ್ || ೨||

ಕೃತಿ ಮಹಾದಧಿ ಉದದೌ ಸತಿ ಪತನ ಕಾರಣಂ ಏವ ತಸ್ಯ ಫಲಮ್ ಆಶಾಶ್ವತಮ್. ಮಾಡುವ ಕರ್ಮಗಳು, ಅದರ ಫಲಗಳು ಸಮುದ್ರದ ಅಲೆಗಳಂತೆ ಏಳುತ್ತಾ ಬೀಳುತ್ತಿರುವಂತೆ ಅವು ಆಶಾಶ್ವತವು.

ಆದ್ದರಿಂದ ಕರ್ಮಾಚರಣೆಯ ಗತಿ ವೇಗವನ್ನು ನಿಯಂತ್ರಣ ಮಾಡುವುದರಿಂದ ಮೋಕ್ಷದ ಹಾದಿ ಸುಗಮವಾಗುತ್ತದೆ

ईश्वरार्पितं नेच्छया कृतम् ।
चित्तशोधकं मुक्तिसाधकम् ॥ ३॥
ಈಶ್ವರಾರ್ಪಿತಂ ನೇಚ್ಛಯಾ ಕೃತಮ್ |
ಚಿತ್ತಶೋಧಕಂ ಮುಕ್ತಿಸಾಧಕಮ್ || ೩||

ಸ್ವಾರ್ಥವನ್ನು ಬಿಟ್ಟು ಕರ್ಮಫಲದ ಅಪೇಕ್ಷೆಯಿಲ್ಲದಂತಹ ಬುದ್ಧಿಯಿಂದ ಕರ್ಮವನ್ನು ಮಾಡುವುದಾದರೆ, ಚಿತ್ತವು ಶುದ್ಧಿಗೊಳ್ಳುತ್ತದೆ. ಇದಕ್ಕೆ ಈಶ್ವರಾರ್ಪಣ ಭಾವ ಎನ್ನುತ್ತಾರೆ. ಇಂಥಹ ನಿಷ್ಕಾಮ ಕರ್ಮವು ಮನಸ್ಸಿನ ಸಮಾಧಾನಕ್ಕೆ ದಾರಿಯಾಗುವುದರಿಂದ ಅದು ಮುಕ್ತಿಗೆ ಸಾಧನವಾಗಬಲ್ಲದು. ಇದನ್ನು ಗಮನವಿಟ್ಟು ತಿಳಿದುಕೊಳ್ಳಬೇಕು.

कायवाङ्मनः कार्यमुत्तमम् ।
पूजनं जपश्चिन्तनं क्रमात् ॥ ४॥
ಕಾಯವಾಙ್ಮನಃ ಕಾರ್ಯಮುತ್ತಮಮ್ |
ಪೂಜನಂ ಜಪಶ್ಚಿನ್ತನಂ ಕ್ರಮಾತ್ || ೪||

ಕಾಯ ಎಂದರೆ ಸ್ಥೂಲ ಶರೀರ, ವಾಕ್ ಎಂದರೆ ಮಾತು, ಮತ್ತು ಮನಸ್ಸಿನ ಚಟುವಟಿಕೆ(ಅಂತಃಕರಣ), ಇವುಗಳು ಬಾಹ್ಯ ಕಣ್ಣುಗಳಿಗೆ ಕಾಣದಂತೆ ಚಲಿಸುತ್ತಿರುವ ಸಂಕಲ್ಪ ವಿಕಲ್ಪ ಪ್ರವಾಹದ ಚಟುವಟಿಕೆಗಳು. ಇದುವೇ ಒಳ ಕಾರ್ಯಗಳು. ಈ ಕಾರ್ಯಗತಿ ಮತ್ತು ವೇಗವನ್ನು ನಿಯಂತ್ರಣ ಮಾಡುವ ವಿಧಾನವೇ, ಕ್ರಮವಾಗಿ ಪೂಜೆ ಮಂತ್ರ ಜಪ. ಇವುಗಳನ್ನು ಮನಸ್ಸಿನಲ್ಲಿಯೇ ಚಿಂತನೆ ನಡೆಸಿದಾಗ ಇವುಗಳೇ ಪ್ರಶಾಂತ ಸ್ಥಿತಿ ತಲಪುವ ಉಪಾಯಗಳಾಗುತ್ತದೆ. ಇದು ಮಹರ್ಷಿಗಳ ವಾಣಿ.

जगत ईशधी युक्तसेवनम् ।
अष्टमूर्तिभृद्देवपूजनम् ॥ ५॥
ಜಗತ ಈಶಧೀ ಯುಕ್ತಸೇವನಮ್ |
ಅಷ್ಟಮೂರ್ತಿಭೃದ್ದೇವಪೂಜನಮ್ || ೫||

ಜಗತಃ. ಪ್ರಪಂಚಸ್ಯ ಈಶಧೀಯುಕ್ತ ಸೇವನಂ ಅಷ್ಟ ಮೂರ್ತಿಬೃತ್ ದೇವ ಪೂಜನಮ್ ಇವ, ಮಹರ್ಷಿಗಳ ಪ್ರಕಾರ, ಈ ಪ್ರಪಂಚವನ್ನು ಪರಮೇಶ್ವರನ ಆಕೃತಿ ಎಂದು ನೋಡುವುದೇ ದೇವ ಪೂಜೆ. ಎಂಟು ಅಂಗಗಳಿಂದ ಕೂಡಿದ ಪರಮೇಶ್ವರನ ರೂಪವನ್ನು ನೋಡಿದಾಗ(ಪಂಚ ಮಹಾಭೂತಗಳು,ಸೂರ್ಯ ಚಂದ್ರ ಮತ್ತು ನಾನು ಎಂಬ ಯಜಮಾನ) ಇದೇ ಅವನಿಗೆ ಅರ್ಪಿಸುವ ಪೂಜೆ. ಎಲ್ಲೆಲ್ಲೂ ಅಲೆದಾಡುವ ಇಂದ್ರಿಯಗಳನ್ನು, ಕುಣಿಯುವ ಮನಸ್ಸನ್ನು ಒಳಗೆ ಇರಿಸಿ ಪರಮಾತ್ಮನಲ್ಲಿ ನಿಲ್ಲಿಸುವುದು, ಒಂದು ತಪಸ್ಸು ಮತ್ತು ಸಾಧನೆ. ಸೂರ್ಯ ಚಂದ್ರರೇ ಕಣ್ಣುಗಳಂತಿರುವ ಈ ಶರೀರ ಪಂಚಭೂತಗಳಿಂದ ಆಗಿರುವುದರಿಂದ, ದೇಹವನ್ನು ದೇವಾಲಯಕ್ಕೆ ಹೋಲಿಸಿ, “ದೇಹೋ ದೇವಾಲಯಃ ಪ್ರೋಕ್ತಾ ಜೀವೋ ದೇವಃ ಸನಾತನಃ” ಎಂದಿದ್ದಾರೆ.

उत्तमस्तवादुच्चमन्दतः ।
चित्तजं जपध्यानमुत्तमम् ॥ ६॥
ಉತ್ತಮಸ್ತವಾದುಚ್ಚಮನ್ದತಃ |
ಚಿತ್ತಜಂ ಜಪಧ್ಯಾನಮುತ್ತಮಮ್ || ೬||

ಯಾವ ರೀತಿ ನಾವು ಮಂತ್ರ ಜಪವನ್ನು ಮಾಡಬೇಕು ಎನ್ನುವುದು ಮುಖ್ಯ. ಜಪವನ್ನು ಗಟ್ಟಿಯಾಗಿ ಉಚ್ಚರಿಸವುದಕ್ಕಿಂತ, ಮಂದ ಮಧ್ಯಮ ಸ್ವರದಲ್ಲಿ ಹೇಳುವುದು ಉತ್ತಮ. ಇದೇ ಜಪವನ್ನು ಮಾನಸಿಕವಾಗಿ ಆಚರಿಸಿದಾಗ ಅದು ಅತಿ ಉತ್ತಮ. ಯಾವರೀತಿಯ ಶಬ್ದವನ್ನೂ ಉಚ್ಚರಿಸದೇ ಮನದಲ್ಲೇ ನಿರಂತವಾಗಿ ಜಪವನ್ನು ಸಕ್ರಿಯಗೊಳಿಸಿಳದರೆ ಅದು ಮಹರ್ಷಿಗಳ ಪ್ರಕಾರ ಅತ್ಯುತ್ತಮ.

आज्यधारया स्रोतसा समम् ।
सरलचिन्तनं विरलतः परम् ॥ ७॥
ಆಜ್ಯಧಾರಯಾ ಸ್ರೋತಸಾ ಸಮಮ್ |
ಸರಲಚಿನ್ತನಂ ವಿರಲತಃ ಪರಮ್ || ೭||

ಮನದಲ್ಲಿ ಯಾವ ರೀತಿ ಜಪವನ್ನು ಮಾಡಬೇಕು? ತುಪ್ಪದ ಧಾರೆಯಂತೆ,ಅಥವಾ ಜೇನುತುಪ್ಪವನ್ನು ಪಾತ್ರೆಗೆ ಸುರಿದಾಗ ಬರುವ ಸತತ ಧಾರೆಯಂತೆ ಅಥವಾ ಹರಿಯುವ ನದಿ, ಯಾವ ರೀತಿ ಅಲೆಗಳಿಲ್ಲದೆ ಪ್ರಶಾಂತವಾಗಿ ಸಾಗುತ್ತದೆಯೋ,ಆ ರೀತಿಯಲ್ಲಿ ಅವಿಛಿನ್ನವಾಗಿ ಪರಮಾತ್ಮನ ಚಿಂತೆ, ಸ್ಮರಣೆ ನಡೆಯಬೇಕು. ಯಾವ ಎಡರು ತೊಡರುಗಳಿಲ್ಲದ, ಅಡೆಚನೆಗಳೂ ಇಲ್ಲದ ರೀತಿ ಆತ್ಮ ಚಿಂತನ ಸಾಧಿಸುವುದು ಬಹಳ ಮುಖ್ಯ.

. भेदभावनात् सोऽहमित्यसौ ।
भावनाऽभिदा पावनी मता ॥ ८॥
ಭೇದಭಾವನಾತ್ ಸೋऽಹಮಿತ್ಯಸೌ |
ಭಾವನಾऽಭಿದಾ ಪಾವನೀ ಮತಾ || ೮||

ಈಶ್ವರನು ತನಗಿಂತ ಬೇರೆ ಎಂದು ಮಾಡುವ ಜಪಕ್ಕೆ ಭೇದ ಭಾವನೆ ಎನ್ನುತ್ತಾರೆ. ಇದರಿಂದ ದ್ವೈತ ಭಾವನೆ ಉಂಟಾಗುವುದರಿಂದ, ಸೋಹಂ ಎಂಬ ಅಭೇಧ ಭಾವನೆ ಬಹಳ ಉತ್ತಮ. ಸಹ ಅಹಂ ಅಂದರೆ ಅವನೇ ನಾನು ಎಂಬ ತಿಳುವಳಿಕೆ ಬಹಳ ಮುಖ್ಯ. ನಾನು ನಾನು ಎಂಬ ಅಹಂ ಸ್ಫುರಣವೇ ಆ ಪರಮೇಶ್ವರ ಎಂಬುವುದು ಅಭೇದ ಭಾವನೆ. ಇಂತಹವರಲ್ಲಿ ಮರಣ ಭಯವೇ ತೋರುವುದಿಲ್ಲ. ಅದ್ದರಿಂದ ಈ ಭಾವನೆಯಲ್ಲಿಯೇ ತೊಡಗಿಸಿಕೊಳ್ಳುವ ಜಪ ಅತ್ಯಂತ ಪಾವನ ಎನ್ನುತ್ತಾರೆ ಮಹರ್ಷಿಗಳು.

भावशून्यसद्भावसुस्थितिः ।
भावनाबलाद्भक्तिरुत्तमा ॥ ९॥
ಭಾವಶೂನ್ಯಸದ್ಭಾವಸುಸ್ಥಿತಿಃ |
ಭಾವನಾಬಲಾದ್ಭಕ್ತಿರುತ್ತಮಾ || ೯||

ಸೋಽಹಂ ಭಾವನೆಯ ಬಲದಿಂದ ಭಾವಶೂನ್ಯವಾದ ಆತ್ಮ ಸ್ಥಿತಿ ದೊರೆಯುವುದೇ ಅತ್ಯುತ್ತಮವಾದ ಭಕ್ತಿ ಭಾವ. ಆಗ ನಮಗೆ ಸೋಽಹಮ್ ಭಾವನೆಯೂ ಇಲ್ಲದೆ(ನಾನು ಶುದ್ಧ ಚೈತನ್ಯ ಪರಮೇಶ್ವರ ಸ್ವರೂಪ ಅನ್ನುವುದೂ ಇಲ್ಲದ ಸ್ಥಿತಿ) ಆತ್ಮನಲ್ಲಿ ಆತ್ಮನಾಗಿ ನಿಲ್ಲುವ ಸ್ಥಿತಿಯೇ ಬಹಳ ಉತ್ತಮ ವಾದ ನೆಲೆ. ವಿಕಾರಗಳೇ ಇಲ್ಲದ ಈ ಸ್ಥಿತಿಗೆ ನಿರ್ವಿಕಲ್ಪ ಸ್ಥಿತಿ ಎನ್ನುತ್ತಾರೆ.

हृत्स्थले मनः स्वस्थता क्रिया ।
भक्तियोगबोधाश्च निश्चितम् ॥ १०॥
ಹೃತ್ಸ್ಥಲೇ ಮನಃ ಸ್ವಸ್ಥತಾ ಕ್ರಿಯಾ |
ಭಕ್ತಿಯೋಗಬೋಧಾಶ್ಚ ನಿಶ್ಚಿತಮ್ || ೧೦||

ಕರ್ಮ ಭಕ್ತಿ ಮತ್ತು ಜ್ಞಾನಗಳು ಮೂರು ವಿಧವಾದ ಸಾಧನಾ ಮಾರ್ಗಗಳು. ಇವು ಒಂದಕ್ಕೊಂದು ಪೂರಕವಾಗಿರುವ ಯುಕ್ತಿಗಳು. ಇದರಲ್ಲಿ, ನಾವು ಯಾವುದಾದರೂ ಒಂದನ್ನು ಬಳಸಿಕೊಂಡು, ಚಂಚಲವಾಗಿ ಓಡುತ್ತಿರುವ ಮನಸ್ಸನ್ನು ಒಂದು ಸ್ಥಿಮಿತಕ್ಕೆ ತರಬಹುದು. ಕರ್ಮದಲ್ಲಿ, ತೊಡಗಿದ್ದಾಗ ಅದರ ಫಲಾಪೇಕ್ಷೆ ಮಾಡದೆ, ಎಲ್ಲವೂ ಸರ್ವಶಕ್ತನ ಶಕ್ತಿಯಿಂದ ನಡೆಯುತ್ತಿದೆ ಎಂಬ ಭಾವನೆ ಇದ್ದಾಗ,ಅಹಂಕಾರ ಏಳದ ಸ್ಥಿತಿಯಲ್ಲಿ ನಿಲ್ಲಬಹುದು. ಈ ಕರ್ಮಗಳೆಲ್ಲವೂ ಕರ್ತೃವಿನ ಆಜ್ಞೆ ಇಂದಲೇ ನಡೆಯುತ್ತದೆ ಎಂಬ ಭಾವನೆಯಿಂದ ಎಲ್ಲ ಕಾರ್ಯಗಳಲ್ಲಿ ತೊಡಗಿದಾಗ ಮನಸ್ಸು ನಿರಾಳ ವಾಗಬಲ್ಲದು. ಈ ಕರ್ಮಗಳು,ಸಾಂಸಾರಿಕ ಕೆಲಸಗಳು ಆಗಬಹುದು, ಪೂಜೆ ಭಜನೆ ಮಾನಸಿಕ ನಾಮ ಜಪವಾಗಬಹುದು, ಶರನಾಗತಿಯ

ಮಾರ್ಗವಾಗಬದು. ಇವೆಲ್ಲವನ್ನೂ ಒಂದು ರುಜು ಭಾವದಿಂದ ಬಳಸಿದಾಗ, ಮನಸ್ಸು ಬುದ್ಧಿಗಳು ಶಾಂತವಾಗಿ, ಅವು ಹೃದಯ ಸ್ಥಾನದತ್ತ ಅಭಿಮುಖ ವಾಗಬಲ್ಲದು. ನಾವು ನಿದ್ದೆಯಲ್ಲಿ ಇದ್ದಾಗ, ಉಸಿರಾಟವು ಒಂದೇ ಸಮನೆ ನಡೆಯುವುದು ಆತ್ಮನ ಸ್ಫುರಣದಿಂದ. ಅಲ್ಲಿ ಯಾವ ಮನಸ್ಸೂ ಬುದ್ಧಿಯೂ ಕೆಲಸಮಾಡದು. ಅದೇರೀತಿ, ಎಚ್ಚರದಲ್ಲಿ ಏಕಾಗ್ರತೆಯಿಂದ ಕರ್ಮಗಳು ನಡೆದಾಗ, ನಿದ್ರೆಯಲ್ಲಿದ್ದ ಸ್ಥಿತಿಯನ್ನು ಎಚ್ಚರದಲ್ಲಿ ತಂದಂತೆ ಆಗುತ್ತದೆ. ಇದನ್ನೇ ಸ್ವ ಸ್ವರೂಪದಲ್ಲಿ ನಿಲ್ಲುವ ಸ್ಥಿತಿ ಎನ್ನುತ್ತಾರೆ. ಮಹರ್ಷಿಗಳು.

वायुरोधनाल्लीयते मनः ।
जालपक्षिवद्रोधसाधनम् ॥ ११॥
ವಾಯುರೋಧನಾಲ್ಲೀಯತೇ ಮನಃ |
ಜಾಲಪಕ್ಷಿವದ್ರೋಧಸಾಧನಮ್ || ೧೧||

ಉಸಿರಾಟದ ಏರಿಳಿತಗಳನ್ನು(ಉಚ್ವಾಸ,ನಿಶ್ವಾಸ ಕುಂಭಕ) ನಿಯಂತ್ರಣ ಮಾಡಿದರೆ, ಮನಸ್ಸು ಲಯವಾಗುತ್ತದೆ. (ನಿದ್ದೆಯಲ್ಲಿ ಇರುತ್ತದೆ). ಇದನ್ನು ಲಯದಿಂದ ಎಬ್ಬಿಸಬೇಕು. ಒಬ್ಬ ಬೇಟೆಗಾರ, ಯಾವ ರೀತಿ ಏಕಾಗ್ರತೆಯಿಂದ ಒಂದು ಪಕ್ಷಿಯನ್ನು ತನ್ನ ಬಲೆಯಲ್ಲಿ ಹಿಡಿಯುತ್ತಾನೆಯೊ, ಅದೇ ರೀತಿ ಮನಸ್ಸನ್ನು ಏಕಾಗ್ರತೆಯಿಂದ ಕಟ್ಟಿ ಹಾಕಿ ಹೃದಯದತ್ತ ತಿರುಗಲು ಅಣಿವು ಮಾಡುವುದೇ ಸಾಧನದ ಮುಖ್ಯ ಭಾಗವಾಗಬೇಕು.

चित्तवायवश्चित्क्रियायुताः ।
शाखयोर्द्वयी शक्तिमूलका ॥ १२॥
ಚಿತ್ತವಾಯವಶ್ಚಿತ್ಕ್ರಿಯಾಯುತಾಃ |
ಶಾಖಯೋರ್ದ್ವಯೀ ಶಕ್ತಿಮೂಲಕಾ || ೧೨||

ಚಿತ್ತವಾಯವಾ ಚಿತ್ಕ್ರಿಯಾಯುತಾ, ಮನಸ್ಸು ಮತ್ತು ಪಂಚ ಪ್ರಾಣಗಳು, ಒಂದು ಜ್ಞಾನಶಕ್ತಿ ಮತ್ತೊಂದು ಕ್ರಿಯಾಶಕ್ತಿ ಇವು ಎರಡು

ಶಾಖೆಗಳಾಗಿ ಕಂಡುಬಂದರೂ  ಇವುಗಳ ಮೂಲ ಶಕ್ತಿ ಯಾದ ನಮ್ಮ ಅಂತಃಕರಣ ಒಂದೇ. ನಮ್ಮ ಇಂದ್ರಿಯಗಳು ಮತ್ತು ಪಂಚಪ್ರಾಣಗಳೆರಡೂ ಸಮನಾಗಿ ಕಾರ್ಯ ನಿರತವಾದಾಗ ನಮ್ಮ ದೇಹ ಆರೋಗ್ಯಕರವಾಗಿ  ಇರಬಲ್ಲದು. ನಾವು ನಿದ್ರಿಸುತ್ತಿರುವಾಗಲೂ ಈ ಪಂಚಪ್ರಾಣಗಳು (ಪ್ರಾಣ, ಅಪಾನ, ವ್ಯಾನ, ಸಮಾನ ಮತ್ತು ಉದಾನ) ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿರುತ್ತವೆ. ಆಗ ಮನಸ್ಸು ಲಯವಾಗಿರುತ್ತದೆ. ಎಚ್ಚರದಲ್ಲಿ ಮನಸ್ಸು ಬುದ್ಧಿ ಪ್ರಾಣ ಗಳೆಲ್ಲವೂ ಕಾರ್ಯ ನಿರತವಾಗಿ ನಮ್ಮ ಚಲನವಲನಗಳು ನಡೆಯುತ್ತವೆ. ಇವು ಎರಡು ಶಾಖೆಗಳಾದರೂ ಒಂದನ್ನು ಗಮನ ಮಾಡಲು ಮತ್ತೊಂದು ಸ್ತಬ್ಧವಾಗಿಬಿಡುತ್ತದೆ.. ಮನಸ್ಸು ಮತ್ತು ಬುದ್ಧಿಯನ್ನು ಆತ್ಮನಲ್ಲಿ ನಿಲ್ಲಿಸುವುದೇ ಪರಮ ಗುರಿ.  ಇದಕ್ಕೆ ಪೂರಕವಾಗಿ ಪ್ರಾಣಾಮವನ್ನು ಅಭ್ಯಾಸಮಾಡಬೇಕು.

लयविनाशने उभयरोधने ।
लयगतं पुनर्भवति नो मृतम् ॥ १३॥
ಲಯವಿನಾಶನೇ ಉಭಯರೋಧನೇ |
ಲಯಗತಂ ಪುನರ್ಭವತಿ ನೋ ಮೃತಮ್ || ೧೩||

ಹೀಗೆ ಪ್ರಾಣಾಯಾಮದ ಕಾರ್ಯ ನಡೆಯುವಾಗ ಮನಸ್ಸು ಲಯವಾದರೆ, ಅದು ನಾಶವಾಗಲಾರದು.  ಲಯದಿಂದ ಮನಸ್ಸಿನ ನಾಶದ ಕಡೆ ನಮ್ಮ ಗಮನ ಹರಿಸಬೇಕು.  ಏಕೆಂದರೆ ಲಯಗೊಂಡ ಮನಸ್ಸು ಬೇಗನೆ ಮತ್ತೆ ಎದ್ದುಬಿಡುತ್ತದೆ. ಇದು ಏಳದೇ ಇರುವ ಸ್ಥಿತಿಗೆ ಮನೋನಾಶ ಎನ್ನುತ್ತಾರೆ.  ಲಯಗೊಂಡ ಮನಸ್ಸು ಅಲ್ಲೇ ನಿಲ್ಲದಂತೆ ಒಂದೇ ರೀತಿಯಾಗಿ ಆತ್ಮಚಿಂತನೆಯಲ್ಲೇ ತೊಡಗಿ ಮನಸ್ಸು ನಾಶವಾಗಲು ನೆರವಾಗಬೇಕು.  ಇದಕ್ಕಾಗಿ ವಿಚಾರ (ಜ್ಞಾನಮಾರ್ಗ) ಮತ್ತು ಚಿಂತನೆ ಬಹಳಷ್ಟು ಬೇಕು. ಇದು  ಕಷ್ಟದ ಸಾಧನೆ ಯಾದುದರಿಂದ ಬಹಳ ಜಾಗರೂಕತೆಯಿಂದ ಇದ್ದು ಸಾಧನೆ ಮಾಡಬೇಕು.

प्राणबन्धनाल्लीनमानसम् ।
एकचिन्तनान्नाशमेत्यदः ॥ १४॥
ಪ್ರಾಣಬನ್ಧನಾಲ್ಲೀನಮಾನಸಮ್ |
ಏಕಚಿನ್ತನಾನ್ನಾಶಮೇತ್ಯದಃ || ೧೪||

ಈ ರೀತಿ ನಷ್ಟಗೊಂಡ ಮನಸ್ಸು ನಮ್ಮ ಹೃದಯದಲ್ಲಿ ಬೆಳಗುತ್ತಿರುವ ಆತ್ಮನಲ್ಲಿ ನಿಂತಾಗ ಅದರ ಗುರಿಯೇ ಆನಂದ ಪ್ರಾಪ್ತಿ. ಇದನ್ನು ಹೊಂದಿದ ಕೂಡಲೇ ಏನನ್ನೂ ಸಾಧಿಸಬೇಕಾದದ್ದು ಇಲ್ಲ. ಇನ್ನೇನೂ ಉಳಿಯುವುದೇ ಇಲ್ಲ ಮತ್ತೆ ಯಾವ ರೀತಿಯ ಸಾಧನೆಯೂ ಬೇಡವಾಗುವುದು. ಎಲ್ಲೋ ಇರುವ ದೇವರು ನಮ್ಮ ರಕ್ಷಣೆಗೆ ಬರುತ್ತಾನೆಂಬ ಭ್ರಮೆಯಲ್ಲಿ ಪ್ರಯತ್ನ ಮಾಡಿದರೆ ಅದು ಸಾಧನೆಯೇ ಅಲ್ಲ. ನಮ್ಮ ಸಾಧನೆ ಎಷ್ಟು ಬಲವತ್ತರವಾದರೆ ಅದರಿಂದಾಗುವ ಶಾಶ್ವತಸುಖ ಮತ್ತು ಆನಂದ ಪ್ರಾಪ್ತಿ ಅಷ್ಟೇ ಮಹತ್ವವಾದದ್ದು.

नष्टमानसोत्कृष्टयोगिनः ।
कृत्यमस्ति किं स्वस्थितिं यतः ॥ १५॥
ನಸೋತ್ಕೃಷ್ಟಯೋಗಿನಃ |
ಕೃತ್ಯಮಸ್ತಿ ಕಿಂ ಸ್ವಸ್ಥಿತಿಂ ಯತಃ || ೧೫||

ಈ ರೀತಿಯಾದ ಸ್ಥಿತಿಯಲ್ಲಿ ಮನಸ್ಸು ಹೋರಗಿನ ವಿಷಯಗಳಿಂದ ಸರಿದಾಗ ಯಾವ ವೃತ್ತಿಗಳೂ ಇಲ್ಲದೆ ಆತ್ಮಾಭಿಮುಖವಾಗಿ ನಿಲ್ಲುತ್ತದೆ. ಆಗ ಹೃದಯದಲ್ಲಿ ಬೆಳಗುತ್ತಿರುವ ಆತ್ಮನಲ್ಲಿ ಮಾತ್ರ ಮನಸ್ಸು ನಿಲ್ಲುತ್ತದೆ. ಇದಕ್ಕೆ ಆತ್ಮ ದರ್ಶನ ಎನ್ನುತ್ತಾರೆ. ಇದೇ ತತ್ವದರ್ಶನ.

दृश्यवारितं चित्तमात्मनः ।
चित्त्वदर्शनं तत्त्वदर्शनम् ॥ १६॥
ದೃಶ್ಯವಾರಿತಂ ಚಿತ್ತಮಾತ್ಮನಃ |
ಚಿತ್ತ್ವದರ್ಶನಂ ತತ್ತ್ವದರ್ಶನಮ್ || ೧೬||

ಈ ರೀತಿಯಾದ ಸ್ಥಿತಿಯಲ್ಲಿ ಮನಸ್ಸು ಹೋರಗಿನ ವಿಷಯಗಳಿಂದ ಸರಿದು ಅಂತರ್ಮುಖವಾದಾಗ ವೃತ್ತಿಗಳು ಇಲ್ಲದೆ, ಪ್ರಶಾಂತವಾಗಿ ನಿಶ್ಚಲವಾಗುತ್ತದೆ. ಆಗ ಹೃದಯದಲ್ಲಿ ಬೆಳಗುತ್ತಿರುವ ಆತ್ಮನಲ್ಲಿ ಮನಸ್ಸು ಒಂದಾಗಲು ಸಹಕಾರಿ ಯಾಗುತ್ತದೆ. ಇದಕ್ಕೆ ದೃಕ್ ದೃಶ್ಯ ವಿವೇಕ ಎನ್ನುತ್ತಾರೆ. ಹೊರಗಿನ ಪ್ರಪಂಚ, ಶರೀರ, ಇಂದ್ರಿಯಗಳು ಮನಸ್ಸು ಬುದ್ಧಿ ಅಹಂಕಾರ ಇವೆಲ್ಲವೂ ಆತ್ಮನಿಗೆ ದೃಶ್ಯವಾಗಿರುವುವು. ಆತ್ಮನಾದರೊ ಮೂಲ ದೃಕ್. ದೃಶ್ಯವಾರಿತಮ್ ಮನಃ ಎಂದರೆ ,ಇವೆಲ್ಲವನ್ನೂ ದಾಟಿ ಮನಸ್ಸು ಆತ್ಮನಲ್ಲಿ ಲೀನವಾಗಬೇಕು. ಯಾವ ಚಿತ್ರಗಳೂ ಚಿಂತೆಗಳೂ ಇಲ್ಲದ ಮನಸ್ಸು ಆತ್ಮನಲ್ಲಿ ನಿಂತಾಗ, ಇರುವುದು ಆತ್ಮನೊಬ್ಬನೇ ಅಲ್ಲವೇ. ಅವನೇ ಸಚ್ಚಿದಾನಂದ ಸ್ವರೂಪ. ಅದೇ ಆತ್ಮ ಸಾಕ್ಷಾತ್ಕಾರ, ಆತ್ಮದರ್ಶನ, ತತ್ವದರ್ಶನ.

मानसं तु किं मार्गणे कृते ।
नैव मानसं मार्ग आर्जवात् ॥ १७॥
ಮಾನಸಂ ತು ಕಿಂ ಮಾರ್ಗಣೇ ಕೃತೇ |
ನೈವ ಮಾನಸಂ ಮಾರ್ಗ ಆರ್ಜವಾತ್ || ೧೭

ಮಾನಸಂತು ಕಿಮ್...ಆ ಮನಸ್ಸು ಎಂದರೇನು? ಮನ ಎವ ಮನುಷ್ಯಾಣಾಂಕಾರಣಮ್ ಬಂಧ ಮೋಕ್ಷಯೇ. ನಮ್ಮೆಲ್ಲರನ್ನು ಈ ಜಗತ್ತಿಗೆ ಕಟ್ಟಿಹಾಕುವುದೇ ಮನಸ್ಸು. ಆದರೆ ಅದೇ ಮನಸ್ಸು, ನಮ್ಮೆಲ್ಲರನ್ನೂ ಅದೇ ಸಂಕೋಲೆಯಿಂದ ಬಿಡಿಸಬಲ್ಲದು. ಯಾವರೀತಿಯ ಚಿಕ್ಕ ಚಿಕ್ಕ ಕಾರ್ಯಗಳಾದರೂ ಮನಸ್ಸಿನ ಸಹಾಯದಿಂದಲೇ ನಡೆಯಬೇಕು. ನಮಗೆಲ್ಲ ಪ್ರಕೃತಿ ಕರುಣಿಸಿರುವ ಭಾಗ್ಯವೇ ಮನಸ್ಸು. ನಿಸರ್ಗವು ಕರುಣಿಸಿರುವ ದೊಡ್ಡ ಉಪಕರಣವು ಮನಸ್ಸೇ. ಇದನ್ನೇ ನಾವು ಉಪಯೋಗಿಸಿಕೊಳ್ಳಬೇಕು. ಹೇಗೆ ನಾವು, ನಮ್ಮ ಕಾಲಿನಲ್ಲಿ ಹುದುಗಿರುವ ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುತ್ತೇವೆಯೋ ಮತ್ತು ಆ ಎರಡನ್ನೂ ತ್ಯಜಿಸಿಬಿಡುತ್ತೇವೆಯೋ

ಅದೇರೀತಿ ಮನಸ್ಸನ್ನು ಮನಸ್ಸಿನಿಂದ ಹುಡುಕತೊಡಗಿದರೆ ಅದೇ ಇಲ್ಲವಾಗಿ ಬಿಡುತ್ತದೆ.

वृत्तयस्त्वहं वृत्तिमाश्रिताः ।
वृत्तयो मनो विद्ध्यहं मनः ॥ १८॥
ವೃತ್ತಯಸ್ತ್ವಹಂ ವೃತ್ತಿಮಾಶ್ರಿತಾಃ |
ವೃತ್ತಯೋ ಮನೋ ವಿದ್ಧ್ಯಹಂ ಮನಃ || ೧೮||

ಆದ್ದರಿಂದ ನಿಜವಾದ ರೀತಿಯಲ್ಲಿ ಮನಸ್ಸನ್ನು ಹಿಡಿಯ ಬೇಕಾದರೆ,ನಮ್ಮ ಅಂತಃಕರಣವನ್ನು ಶೋಧಿಸಬೇಕು. ಚಿತ್ತ ಶೋಧಕಮ್ ಮುಕ್ತಿಸಾಧನಂ. ಚಿತ್ತ ಎಂದರೆ ನಮ್ಮಲ್ಲಿ ಆಗಿಹೋದ ವಿಷಯಗಳ,ನೆನೆಪು ಮತ್ತು ಮರೆವುಗಳ ಒಂದು ದೊಡ್ಡ ಗಂಟು. ಇದೊಂದು ರೀತಿಯ ಬುಟ್ಟಿ ಇದ್ದಹಾಗೆ. ಕೆಲವು ಘಟನೆಗಳು ಆ ಬುಟ್ಟಿಯಲ್ಲಿ ತೇಲುತ್ತಿರುತ್ತದೆ ಮತ್ತೆ ಕೆಲವು ಅದರ ತಳದಲ್ಲಿ ಇದ್ದು ಬಿಡುತ್ತದೆ. ಇದಕ್ಕೆ ಅಹಂವೃತ್ತಿ ಮತ್ತು ಇದಂ ವೃತ್ತಿ ಎನ್ನುತ್ತಾರೆ. ನಾವೆಲ್ಲರೂ ನಿದ್ರಿಸುವಾಗ ಅಲ್ಲಿ ಯಾವ ವೃತ್ತಿಯೂ ಇರುವುದಿಲ್ಲ. ಮನಸ್ಸು. ಬುದ್ಧಿ ಇಲ್ಲ. ಅಹಂಕಾರವು ಇಲ್ಲವೇ ಇಲ್ಲ. ಇವೆಲ್ಲವೂ ನಾವು ಎಚ್ಚೆತ್ತಕೂಡಲೇ ಒಂದರ ಹಿಂದೆ ಈ ವೃತ್ತಿಗಳು ಎದ್ದು, ನಾನು ನನ್ನದು ಎಂಬುದು ತೋರಿ, ನಮ್ಮನ್ನು ಆ ಮೂಲ ಸ್ವರೂಪದಿಂದ ದೂರ ಕೊಂಡೊಯ್ಯುತ್ತದೆ. ಮನಸ್ಸಿನಲ್ಲಿ ಚಿತ್ರಗಳು ಎಡೆಬಿಡದೆ ಬರುತ್ತಲೇ ಇರುತ್ತವೆ. ಆದರೆ ನಾವು ಈ ಸೂಕ್ಷ್ಮ ಮನಸ್ಸನ್ನು ಹಿಡಿಯಬೇಕಾದರೆ ,ಎಲ್ಲ ವೃತ್ತಿಗಳನ್ನೂ ನಾಶ ಮಾಡ ಬೇಕಾಗುತ್ತದೆ. ಈ ಅಹಂ ಯಾರು?ಏಕೆ ಏಳುತ್ತದೆ? ಎಲ್ಲಿ ಏಳುತ್ತದೆ? ಮತ್ತು ಹೇಗೆ ಏಳುತ್ತದೆ? ಎಂದು ವಿಚಾರದಲ್ಲಿ ನಿಲ್ಲುವುದೇ ನಮ್ಮ ಗುರಿ ಆಗಬೇಕು.

अहमयं कुतो भवति चिन्वतः ।
अयि पतत्यहं निजविचारणम् ॥ १९॥
ಅಹಮಯಂ ಕುತೋ ಭವತಿ ಚಿನ್ವತಃ |

ಅಯಿ ಪತತ್ಯಹಂ ನಿಜವಿಚಾರಣಮ್ || ೧೯||

ಆದರೆ ಈ ಮನಸ್ಸೇ ನಮ್ಮನ್ನು ತಪ್ಪುದಾರಿಯಲ್ಲಿ ಎಳೆಯುವುದರಿಂದ ಮುಂದೆ ಒಂದು ಹೆಜ್ಜೆ ಇಟ್ಟು ಹೋದಾಗ,ಆ ಇದಂ ವೃತ್ತಿಗಳು ಯಾವರೀತಿಯಲ್ಲಿ. ಏನೆಲ್ಲಾ ಮನಸ್ಸಿನಲ್ಲಿ ಲಯವಾಗುತ್ತದೆಯೋ, ಅದೆಲ್ಲಾ ತೆಗೆದರೂ ಅಹಂಕಾರ ಉಳಿದುಕೊಂಡು ಬಿಡುತ್ತದೆ. ಈ ನಾನು ನಾನು ಎಂಬ ಸ್ಪುರಣ ಎಲ್ಲಿಂದ ಏಳುತ್ತದೆ(ಅಯಂ ಅಹಂ ಕುತೋ ಭವತಿ) ಈ ಧಾರೆಯಲ್ಲಿ ನಾವು ಮುಳುಗಿದಾಗ ಅಹಂ ಎನ್ನುವ ಅಹಂಕಾರವೇ ನಷ್ಟವಾಗಿ,(ಆಯಿ ಪತತಿ) ಬಿದ್ದು ಹೋಗಿ ಬಿಡುತ್ತದೆ. ಏಕೆಂದರೆ ಈ ಅಹಂಕಾರಕ್ಕ ಯಾವ ಅಸ್ತಿತ್ವವೂ ಇಲ್ಲ. ಆಧಾರವೂ ಇಲ್ಲ. ನಾವೆಲ್ಲ ತಿಳಿದಿರುವುದು,ಈ ಜೀವ ನಾಶವಾದಮೇಲೇ ಪರಮಾತ್ಮನಲ್ಲಿ ಐಕ್ಯವಾಗುವುದೇ ಮೋಕ್ಷ ಎಂದು. ಇದು ಬರಿಯ ಕಲ್ಪನೆಯೇ ಹೊರತು ಬೇರೇನೂ ಅಲ್ಲ. ಆ ನಿಜವಾದ ನಾನು ಎಂಬುವುದು ಎಲ್ಲ ಹೃದಯಗಳನ್ನು ಬೆಳಗುತ್ತಿರುವ ಶುದ್ಧ ಚೈತನ್ಯವೇ ಹೊರತು ಬೇರೆ ಎನೂ ಅಲ್ಲ. ಆ ಸ್ವರೂಪದಲ್ಲಿ ನಾನು ಎಂಬ ರೀತಿ ನಿಲ್ಲುವಾಗ ಬೇರೇನೂ ಉಳಿಯುವುದಿಲ್ಲ ಮತ್ತು ಉಳಿಯಲು ಸಾದ್ಯವೇ ಇಲ್ಲ. ಇದೇ ಅರಿವು ಮತ್ತು ಇದೇ ಇರವು.

अहमि नाशभाज्यहमहंतया ।
स्फुरति हृत्स्वयं परमपूर्णसत् ॥ २०॥
ಅಹಮಿ ನಾಶಭಾಜ್ಯಹಮಹಂತಯಾ |
ಸ್ಫುರತಿ ಹೃತ್ಸ್ವಯಂ ಪರಮಪೂರ್ಣಸತ್ || ೨೦||

ಈ ಅಹಂಕಾರವು ನಾಶವಾದ ಮೇಲೆ ನಮ್ಮ ನಿಜ ಜೀವನ ಆರಂಭಗೊಳ್ಳುತ್ತದೆ. ಅಲ್ಲಿ ನಮ್ಮ ಎಲ್ಲಾ ತಪ್ಪು ತಿಳುವಳಿಕೆಗಳು ನಷ್ಟವಾಗಿ ಒಂದು ಸರ್ವ ವ್ಯಾಪಿ ಚೇತನ ಪೂರ್ಣವಾಗಿ, ತಾನೇ ಸ್ವಯಂ ಸ್ಪುರಣ ಮಾಡುತ್ತಿರುತ್ತದೆ.

इदमहं पदाऽभिख्यमन्वहम् ।
अहमिलीनकेऽप्यलयसत्तया ॥ २१॥
ಇದಮಹಂ ಪದಾಽಭಿಖ್ಯಮನ್ವಹಮ್ |
ಅಹಮಿಲೀನಕೇಽಪ್ಯಲಯಸತ್ತಯಾ || ೨೧||

ಈ 'ನಾನು' ಎಂಬ ಆತ್ಮನಿಷ್ಠೆಯೇ ಸತ್ಯವಾದದ್ದು. ಅದೇ ನಾನು ನಾನು ಎನ್ನುವುದು. ಆದರೆ ನಾವು ತಿಳಿದಿದುವ ನಾನೇ ಬೇರೆ ಆಗಲು ಕಾರಣ ಏನೆಂದರೆ, ನಾವು ಇದರ ಮೇಲೆ, ನಮ್ಮ ಶರೀರ ಬುದ್ಧಿಗಳನ್ನು ಉಪಾಧಿಗಳಾಗಿ ಹಾಕಿ ನಿಜವಾದ ನಾನು ಮುಚ್ಚಿಬಿಟ್ಟಿದ್ದೇವೆ. ಆದರೆ ಸ್ಫುರಣ ಮಾಡುತ್ತಿರುವುದು ಅದೇ ಸತ್ ಸ್ವರೂಪ. ಎಲ್ಲ ಮಹಾತ್ಮರುಗಳು ನೆಲೆ ನಿಂತಿರುವುದು ಈ ಸ್ವರೂಪದಲ್ಲಿಯೇ. ಆದ್ದರಿಂದ ನಾವು ಅಂತಹವರ ಸಾನಿಧ್ಯದಲ್ಲಿ ಇದ್ದಾಗ, ಆ ತರಂಗಗಳು ನಮ್ಮನ್ನು ಎಚ್ಚರಗೊಳಿಸಿ ಆ ತಪ್ಪು ತಿಳುವಳಿಕೆಯಿಂದ ಸ್ವಲ್ಪ ಕಾಲ ಮಾಯವಾಗಿ ಮರೆತು ನಿಲ್ಲುವುದಕ್ಕೆ ಇದೇ ಕಾರಣ.

विग्रहेन्द्रियप्राणधीतमः ।
नाहमेकसत्तज्जडं ह्यसत् ॥ २२॥
ವಿಗ್ರಹೇನ್ದ್ರಿಯಪ್ರಾಣಧೀತಮಃ |
ನಾಹಮೇಕಸತ್ತಜ್ಜಡಂ ಹ್ಯಸತ್ || ೨೨||

ಜ್ಞಾನಿಯು ಯಾವ ರೀತಿ ವಿಹರಿಸುತ್ತಾನೆ? ತನಗೆ ದೇಹ, ಮನಸ್ಸು, ಬುದ್ಧಿ, ಇಂದ್ರಿಯಗಳೆಲ್ಲವೂ ಇದ್ದರೂ,ತಾನು, ಇದು ಯಾವುದೂ ಅಲ್ಲದ ಶುದ್ಧ ಚೈತನ್ಯ ಎನ್ನುತ್ತಾನೆ. ಶರೀರ, ಇಂದ್ರಿಯಗಳು ,ಮನಸ್ಸು, ಬುದ್ಧಿಗಳೆಲ್ಲವೂ ಜಡವಾಗಿ ಇರತಕ್ಕವು( ತಜ್ಜದಮ್ ಹಿ ಅಸತ್). ಅವುಗಳಿಗೆ ಸ್ವಯಮ್ ಕಾರ್ಯ ಮಾದಲು ಶಕ್ತಿ ಇಲ್ಲ. ಅವುಗಳಿಗೆ ಆಧಾರವಾಗಿ ನಿಂತಿರುವ ಸತ್ವರೂಪವಾದ 'ನಾನು' ಎಂಬುದರ ಸಾನಿಧ್ಯದಲ್ಲಿ ಇವುಗಳಿಗೆ ಅಸ್ಥಿತ್ವವೇ ಹೊರತು ಬೇರೆ ಇಲ್ಲ. ಆದರೆ, ಆ ಚಿತ್ ಸ್ವರೂಪದ ಹಿಂದೆಯೋ ಅಥವಾ ಅದನ್ನು ಬೆಳಗುವ

ಮತ್ತೊಂದು ಯಾವುದಾದರೂ ಸ್ವರೂಪ ಇದೆಯೇ ಎಂಬ ಸಂಶಯವನ್ನು ನಿವಾರಿಸಲು ಮಹರ್ಷಿಗಳು ಮುಂದೆ ಹೆಜ್ಜೆ ಇಡುತ್ತಾರೆ.

सत्त्वभासिका चित्क्ववेतरा ।
सत्तया हि चिच्चित्तया ह्यहम् ॥ २३॥
ಸತ್ತ್ವಭಾಸಿಕಾ ಚಿತ್ಕ್ವವೇತರಾ |
ಸತ್ತಯಾ ಹಿ ಚಿಚ್ಚಿತ್ತಯಾ ಹ್ಯಹಮ್ || ೨೩||

ಸತ್ ಸ್ವರೂಪವನ್ನು ಬೆಳಗುವ ಚಿತ್ ಸ್ವರೂಪ ಬೆರೆಯೋ,ಒಂದೋ ಎಂಬ ಪ್ರಸ್ನೆಗೆ ಉತ್ತರ, ಇವೆರಡೂ ಒಂದೇ ಏಕೆಂದರೆ ಆತ್ಮನನ್ನು ಸತ್ ಚಿತ್ ಆನಂದ ಸ್ವರೂಪ ಎನ್ನುತ್ತಾರೆ. ಯಾವ ನಾನು ನಾನು ಎಂದು ಹೃದಯದಲ್ಲಿ ಸ್ಫುರಣ ಮಾಡುತ್ತಿದೆಯೋ ಅದು ಮೂರು ಕಾಲಗಳಲ್ಲಿಯೂ ಬದಲಾವಣೆ ಹೊಂದದ ಸತ್ ಸ್ವರೂಪ ಕೂಡ, ಏಕಂದರೆ,ಹೃದಯವನ್ನು ಬೆಳಗುವ ಮತ್ತು ಬೆಳಗುತ್ತಿರುವ ಆತ್ಮನೇ ಚಿತ್ ಸ್ವರೂಪ..

ईशजीवयोर्वेषधीभिदा ।
सत्स्वभावतो वस्तु केवलम् ॥ २४॥
. ಈಶಜೀವಯೋರ್ವೇಷಧೀಭಿದಾ |
ಸತ್ಸ್ವಭಾವತೋ ವಸ್ತು ಕೇವಲಮ್ || ೨೪||

ಆದರೆ, ಈಶ್ವರ ಬೇರೆ ಜೀವ ಬೇರೆ ಎನ್ನುತ್ತಾರೆಯಲ್ಲಾ? ಮಹರ್ಷಿಗಳು ಇದಕ್ಕೆ ಉತ್ತರಿಸುತ್ತಾರೆ. ಈಶ್ವರ ಮತ್ತು ಜೀವಗಳಲ್ಲಿ ಭೇದ ಇದೆ. ಎಲ್ಲಿದೆ? ವೇಷದಲ್ಲಿ ಮತ್ತು ಬುದ್ಧಿಯಲ್ಲಿ ಅಹಂಕಾರದಲ್ಲೂ ಭೇದ ಇದೆ. ಇವೆರಡೂ ಮನಸ್ಸಿನ ಮತ್ತು ಶಾರೀರಿಕ ಭೇದ. ನಾನು ಪಾಪಿ, ನಾನು ಜ್ಞಾನಿ ಎನ್ನುವುದಿಲ್ಲವೇ ಎಲ್ಲರೂ! ಆದರೆ ಇದು ಹೊರಗಿನ ಪ್ರಪಂಚಕ್ಕೆ ಸೀಮಿತ. ಏಕೆಂದರೆ, ಸಮುದ್ರ ಮತ್ತು ಅಲೆಗಳನ್ನು ಗಮನಿಸಿದಾಗ,ಎರಡರಲ್ಲೂ ಇರುವುದು ಒಂದೇ ನೀರು ಆದರೂ,ನಾವು ಅಲೆ ಮತ್ತು ಸಮುದ್ರ ಎಂದು ವಿಭಜನೆಯಿಂದ

ನೋಡುತ್ತೇವಲ್ಲವೋ?ಎತ್ತೆತ್ತ ನೋಡಿದರೂ  ನೀರು ಒಂದೇ ಅಲ್ಲವೇ? ಆದ್ದರಿಂದ,ನೀರಿನ ದೃಷ್ಟಿಯಿಂದ  ಅದರ ಸ್ವರೂಪ ಒಂದೇ. ಸತ್ಸ್ವಭಾವತಃ ವಸ್ತು ಕೇವಲಂ. ಜೀವ ಈಶ್ವರ ಒಬ್ಬನೇ. ಬೇರೆ ಆಗಲು ಸಾಧ್ಯವೇ ಇಲ್ಲ.  ಬ್ರಹ್ಮ ಸ್ವರೂಪವೇ ಜೀವ.

वेषहानतः स्वात्मदर्शनम् ।
ईशदर्शनं स्वात्मरूपतः ॥ २५॥
ವೇಷಹಾನತಃ ಸ್ವಾತ್ಮದರ್ಶನಮ್ |
ಈಶದರ್ಶನಂ ಸ್ವಾತ್ಮರೂಪತಃ || ೨೫||

ಕನಸಿಂಲ್ಲಿರುವ ನಾನು ಮತ್ತು ಎಚ್ಚರದ ನಾನು ಒಂದೇ ಅಲ್ಲವೇ. ಆ ಕನಸಿನ ನಾನು ಎಚೆತ್ತಾಗ, ಬೇರೆ ನಾನು ಎಂಬುದನ್ನು ಹುಡುಕಲು ಹೋಗುತ್ತಾನೆಯೇ.  ಇಲ್ಲವಲ್ಲಾ.  ಆದ್ದರಿಂದ ಅವರಿಬ್ಬರೂ ಒಂದೇ ಅಲ್ಲದೆ ಬೇರೆ ಬೇರೆ ಅಲ್ಲ.  ಇಬ್ಬರಲ್ಲಿ ಇರುವ ಚೈತನ್ಯ ಒಂದೇ.  ನಾವು ತಿಳಿಯ ಬೆಕಾದದ್ದು ಜ್ಞಾನ ಆಲ್ಲವೇ.  ಇದು ಬುದ್ಧಿಯ ವೃತ್ತಿ. ನನಗೆ ಗೊತ್ತಿಲ್ಲವೆನ್ನುವುದು ಅಜ್ಞಾನ. ಅಹಮ್ ಬುದ್ಧಿಯ ವೃತ್ತಿ.  ಇವೆರಡನ್ನು ಬೆಳಗುವುದು ಒಂದೇ ಚೈತನ್ಯ  ಆದ್ದರಿಂದ ವಿಚಾರದಿಂದ ಅಹಂಕಾರವು ನಾಶವಾದಾಗ, ನಾನು ನಾನು ಎಂಬ ಸ್ವರೂಪದರ್ಶನವೇ ಆತ್ಮ ದರ್ಶನ.  ಇದೇ. ಈಶ ದರ್ಶನ.

आत्मसंस्थितिः स्वात्मदर्शनम् ।
आत्मनिर्द्वयादात्मनिष्ठता ॥ २६॥
ಆತ್ಮಸಂಸ್ಥಿತಿಃ ಸ್ವಾತ್ಮದರ್ಶನಮ್ |
ಆತ್ಮನಿರ್ದ್ವಯಾದಾತ್ಮನಿಷ್ಠತಾ || ೨೬||

ನಾವು ಇಂದ್ರಿಯ ಮನಸ್ಸು ಬುದ್ಧಿಗಳಿಂದ ಆತ್ಮನನ್ನು ನೋಡಲು ಆಗುವುದಿಲ್ಲ.  ನಾವು ಒಂದು ಹೂವನ್ನು ನೋಡುತ್ತೇವೆ ಎಂದಾಗ,ನಮ್ಮ ದೃಷ್ಟಿ ಅಕ್ಷಿ ಪಟಲದ ಮೇಲೆ ಬೀಳುತ್ತದೆ.  ಕಣ್ಣು ಅದನ್ನು ನೋಡುತ್ತಿರುತ್ತದೆ. ಆಗ, ಬರಿಯ ನೋಟ (ಇರವು) ಇರುತ್ತದೆ.

ಆದೇ ದೃಷ್ಟಿ, ಚಿತ್ತದತ್ತ ಹರಿದು ಮನಸ್ಸಿನ ಕಡೆ ಹೋದಾಗ, ನಾನು ನೋಡುತ್ತಿರುವವ, (ದೇಹಧಾರಿಯಾದವ), ತಿಳಿದು ಕೊಳ್ಳುತ್ತಿರುವವ) ಎಂಬ ಭಾವನೆ ಉಂಟಾಗಿ, ಆ ಹೂವಿನ ಹಳೆಯ ನೆನೆಪನ್ನು ತಂದು ಕೊಂಡು, ಅದು ಗುಲಾಬಿ ಅಥವಾ ಮಲ್ಲಿಗೆ ಎಂದು ವಿಭಜನೆ ಮಾಡಿ ಅದರ ಬಣ್ಣ ಗುಣಗಳ ಬಗ್ಗೆ ಚಿಂತನೆ ನಡೆಸುತ್ತೇವೆ. ಆಗ ನೋಟವು ಹೋಗಿ ನೋಡುವವನ ಪಾತ್ರ ಬರುತ್ತದೆ. ಇಲ್ಲಿ ನೋಡುವವ ಬೇರೆ ಮತ್ತು ನೋಡಲ್ಪಡುವ ವಸ್ತು ಬೇರೆ ಎಂಬ ವಿಭಜನೆ ಆಗುತ್ತದೆ.

ಆದರೆ,ನಾವು ಈ ರೂಪದಲ್ಲಿದ್ದು, ಸಾಕ್ಷಿಯನ್ನುನೋಡಲು ಸಾಧ್ಯವಿಲ್ಲ. ಮನಸ್ಸು ಚಿತ್ತ ಬುದ್ಧಿ ಮತ್ತು ಅಹಂಕಾರಗಳನ್ನು ದಾಟಿ ನಿಂತಾಗಲೇ ಸ್ವ ಸ್ವರೂಪದ ದರ್ಶನ ಸಾಧ್ಯ. ಏಕೆಂದರೆ ಸಾಕ್ಷಿಗೆ ಯಾವ ಗುಣಗಳೂ ಇಲ್ಲ. ನಾನು ಹೂವನ್ನು ನೋಡಿದ ರೀತಿ ಸಾಕ್ಷಿಯನ್ನು ನೋಡಲು ಆಗದು.
ಆದ್ದರಿಂದ ಆತ್ಮನನ್ನು ನೋಡಿದೆ ಎಂದಾಗ (ಆತ್ಮನಿರ್ಧ್ಯಯಾತ್) ಆತ್ಮ ಸ್ವರೂಪವನ್ನು ತಲಪಲು (ಆತ್ಮಸಂಸ್ಥಿತಿ) ಅಸಾಧ್ಯ ಎಂಬುದು ಮಹರ್ಷಿಗಳ ವಾಣಿ.

ಇಲ್ಲಿ ನಾನು ನಾನು ಎನ್ನುವವನನ್ನು ಪ್ರಮಾತೃ, ಜ್ಞಾತೃ ಕರ್ತೃ ಎಂದೂ ಕರೆಯುತ್ತಾರೆ. ಸಾಕ್ಷಿ (ಅರಿವು) ಮತ್ತು ಪ್ರಮಾತೃಗಳ ಬಗ್ಗೆ ಸ್ವಲ್ಪ ವಿವರಣೆ ಅಗತ್ಯ. ಎಚ್ಚರದಲ್ಲಿರುವ ಅರಿವು, ಕನಸ್ಸಿನಲ್ಲಿ,ಇರುವ ಅರಿವು, ನಿದ್ದೆಯಲ್ಲಿ ಇರುವ ಅರಿವು ಎಲ್ಲವೂ ಒಂದೇ. ಆದರೆ ಎಚ್ಚರದಲ್ಲಿ,ನಾವು ಬಹಿರ್ಮುಖರಾದಾಗ,ಈ ಸಾಕ್ಷಿಯೇ ಪ್ರಮಾತೃ(ನಾನು ನಾನು) ರೂಪ ತಾಳುತ್ತದೆ. ಆಗ, ನಾವು, ಪ್ರಪಂಚವನ್ನು,ಇಂದ್ರಿಯ ಮನಸ್ಸು ಬುದ್ಧಿಗಳಿಂದ ದೇಶ ಕಾಲಗಳಿಂದ ಒಂದು ವಸ್ತುವನ್ನು ತಿಳಿಯುತ್ತೇವೆ. ಒಂದೊಂದು ಪದಾರ್ಥವನ್ನೂ ವಿಂಗಡಣೆ ಮಾಡಿ ಅದರ ಅಂಶಗಳನ್ನು ಬಿಡಿಬಿಡಿಯಾಗಿ ಗಮನಕ್ಕೆ ತರುತ್ತೇವೆ. ಇದೇ ಜಗತ್ತಿಗೆ ಸಂಬಂಧಿಸಿದ ಪ್ರಮಾತೃ ರೂಪ.

ಆದರೆ ಸಾಕ್ಷಿಯು, ಯಾವುದನ್ನೂ ಬಿಡಿಸಿ ಬಿಡಿ ಬಿಡಿಯಾಗಿ ನೋಡುವುದಿಲ್ಲ. ಆಕಾರವನ್ನು ಮರೆತು ಅಕಾಶದಂತೆ ನೋಡುತ್ತದೆ.. ದೇಶ ಕಾಲ, ಒಂದೊಂದು ಅವಸ್ಥೆಯಲ್ಲಿ (ವರ್ತಮಾನ ಭೂತ ಭವಿಷ್ಯತ್) ಬೇರೆ ಬೇರೆಯಾಗಿ ನೋಡುವುದಿಲ್ಲ. ಒಟ್ಟು ಪ್ರಪಂಚವನ್ನು, ಇದಂ ಅಹಂ ಎರಡನ್ನೂ ಸೇರಿಸಿ ನೋಡುತ್ತದೆ. ಆದರೆ,ನೋಟ ಎನ್ನುವುದು ಪ್ರಮಾತೃವಿಗೆ ಸೇರುತ್ತದೆ. ಇದರಲ್ಲಿ ನಾನು ಮತ್ತು ನೋಡುತ್ತಿದ್ದೇನೆ ಎಂಬ ಎರಡು ಅಂಶಗಳು ಸೇರುತ್ತವೆ. ಸಾಕ್ಷಿಗೆ, ನಾನು ಎಂಬ ವೃತ್ತಿಯೂ ಇಲ್ಲ,, ನೋಡುತ್ತಿದ್ದೇನೆ ಎಂಬ ವೃತ್ತಿಯೂ ಇಲ್ಲ. ವೃತ್ತಿ ಇಲ್ಲದ ಅರಿವು ಇರುತ್ತದೆ. ಸುಮ್ಮನೆ ನೋಟ ಅಷ್ಟೇ. ಇದೇ ಸಾಕ್ಷಿಗೂ ಪ್ರಮಾತೃವಿಗೂ ಇರುವ ವ್ಯತ್ಯಾಸ. ಈ ರೀತಿಯಾದ ಸಾಕ್ಷಿ, ಏನೇನು ನೋಡಿದರೂ, ಎಷ್ಟು ಹೊತ್ತು ನೋಡಿದರೂ, ತನ್ನಲ್ಲಿ ಯಾವ ಮಾರ್ಪಾಡು ಆಗದೆ ಇರುತ್ತದೆ. ಸಾಕ್ಷಿ ಸ್ವರೂಪ ಎಂದರೆ,ತಾನಾಗಿ ಇರುವುದು, ನಿಶ್ಚಲವಾಗಿ ಇರುವುದು, ಸ್ಥಿರವಾಗಿ ಇರುವುದು, ಸಂಕಲ್ಪ ವಿಕಲ್ಪ ಇಲ್ಲದೆ ಇರುವುದು. ಬದಲಾಗದೆ ಇರುವುದು. ಇದಕ್ಕೆ ಇರುವಿಕೆ ಎನ್ನುತ್ತಾರೆ.

ज्ञानवर्जिताऽज्ञानहीनचित् ।
ज्ञानमस्ति किं ज्ञातुमन्तरम् ॥ २७॥
ಜ್ಞಾನವರ್ಜಿತಾಽಜ್ಞಾನಹೀನಚಿತ್ |
ಜ್ಞಾನಮಸ್ತಿ ಕಿಂ ಜ್ಞಾತುಮನ್ತರಮ್ || ೨೭||

ನಿಮ್ಮ ನಿಜ ಸ್ವರೂಪದಲ್ಲಿ ನಿಂತ ಮೇಲೆ ತಿಳಿಯುವುದಕ್ಕೆ ಏನಾದರೂ ಉಳಿದಿದೆಯೇ? ಅಂತಹವನು ಏನನ್ನು ನೋಡಬಲ್ಲ, ಏನನ್ನು ಮೂಸಬಲ್ಲ, ಏನನ್ನು ಆಸ್ವಾದಿಸಬಲ್ಲ? ಏನೂ ಉಳಿಯದಹಾಗೆ ಇರುವ ಸ್ಥಿತಿಯೇ ಇರುವಿಕೆ ಅಥವಾ ಇರವು. ಇದೇ ಅರಿವು. ಬೇರೆ ತಿಳಿದುಕೊಳ್ಳಲು ಏನಿದೆ? ಆ ಶುದ್ದ ಬುದ್ಧ ಮುಕ್ತ ಚೈತನ್ಯದಲ್ಲಿ ನಿಲ್ಲುವುದೇ ಎಲ್ಲವನ್ನೂ ತಿಳಿದ ಹಾಗೆ. ಇದೆ ಪರಮ ಸ್ಥಾನ ಪರಮಪುರುಷಾರ್ಥ.

किं स्वरूपमित्यात्मदर्शने ।
अव्ययाऽभवाऽऽपूर्णचित्सुखम् ॥ २८॥
ಕಿಂ ಸ್ವರೂಪಮಿತ್ಯಾತ್ಮದರ್ಶನೇ |
ಅವ್ಯಯಾಽಭವಾಽಽಪೂರ್ಣಚಿತ್ಸುಖಮ್ || ೨೮||

ಇಷ್ಟೆಲ್ಲಾ ಸಾಧನೆ ಮಾಡಿದರೆ ನಮಗೆ ಏನು ಫಲ ಎಂದು ಕೇಳಿದರೆ,ಅದಕ್ಕೆ ಮಹರ್ಷಿಗಳು ಹೀಗೆ ಉತ್ತರಿಸುತ್ತಾರೆ
ಸಾಮಾನ್ಯವಾಗಿ, ನಾವೆಲ್ಲರೂ ಫಲವನ್ನು ಬಯಸಿಯೇ ಎಲ್ಲ ಸಾಧನೆಗಳನ್ನು ಮಾಡುತ್ತೇವೆ. ಬ್ರಹ್ಮ ಸ್ವರೂಪದಲ್ಲಿ ನಿಂತಾಗ, ನಮ್ಮ ಎಲ್ಲ ಕಾಮನೆಗಳು ಪೂರ್ಣಗೊಳ್ಳುತ್ತವೆ (ಸರ್ವಾನ್ ಕಾಮಾನ್ ಸಮಷ್ಣುತ ಇತಿ). ಎಲ್ಲ ಕರ್ಮಗಳು ಜ್ಞಾನಾಗ್ನಿಯಲ್ಲಿ ಸುಟ್ಟು ಭಸ್ಮವಾಗುತ್ತವೆ, ಎಂದು ಉಪನಿಷತ್ತುಗಳು ಹೇಳುತ್ತವೆ.
ಅದೇರೀತಿ, ನಾವು ನಮ್ಮ ಸ್ವಸ್ವರೂಪದಲ್ಲಿ ನಿಂತು ಚಿತ್ ಸುಖದಿಂದ ಉಂಟಾದ ಪರಾಮಶಾಂತಿಯನ್ನು ಪಡೆಯಬೇಕೆಂಬುದು ಮಹರ್ಷಿಗಳ ವಾಣಿ.

ಜ್ಞಾನಿಯಾದವನು,ಭೋಗದಲ್ಲಿರಲೀ,ಯೋಗದಲ್ಲಿರಲೀ,ಸಂಗದಲ್ಲಿರಲೀ , ಅಥವಾ ತನ್ನಷ್ಟಕ್ಕೆ ತಾನೇ ಇದ್ದರೂ, ಅವನು ಬಚ್ಚ ಬರಿಯ ಆನಂದ ಸ್ವರೂಪನಾಗಿಯೇ ನಿಲ್ಲುತ್ತಾನೆ, ಏಕೆಂದರೆ,ಅವನ ಚಿತ್ತವು ಯಾವಾಗಲೂ ಬ್ರಹ್ಮ ಚಿಂತನೇಯಲ್ಲಿಯೇ ಇರುತ್ತದೆ.

बन्धमुक्त्यतीतं परं सुखम् ।
विन्दतीह जीवस्तु दैविकः ॥ २९॥
ಬನ್ಧಮುಕ್ತ್ಯತೀತಂ ಪರಂ ಸುಖಮ್ |
ವಿನ್ದತೀಹ ಜೀವಸ್ತು ದೈವಿಕಃ || ೨೯||

ಆದ್ದರಿಂದ, ಬೇಕು ಬೇಡ ಎಂದು ಕೇಳುವವನೇ ನಷ್ಟ ಹೊಂದುವುದರಿಂದ ಮತ್ತೆ ಬೇಡುವವನೇ ಇಲ್ಲವಲ್ಲಾ. ಆದ್ದರಿಂದ

ಅವನು ಆನಂದ ಸ್ವರೂಪನೇ ಆಗಿ ಬಿಡುತ್ತಾನೆ. ಇದೇ ಸಾಧನೆಯಿಂದ ದೊರೆಯುವ ಆತ್ಯಂತಿಕ ಸುಖ. ನಾಶರಹಿತವಾದ ಆತ್ಮ ಸೂಖವೇ ಶಾಶ್ವತ ಸುಖ.

अहमपेतकं निजविभानकम् ।
महदिदंतपो रमनवागियम् ॥ ३०॥
ಅಹಮಪೇತಕಂ ನಿಜವಿಭಾನಕಮ್ |
ಮಹದಿದಂತಪೋ ರಮನವಾಗಿಯಮ್ || ೩೦||

ನಮ್ಮೆಲ್ಲರ ಅಹಂಕಾರವನ್ನು ನಾಶಮಾಡುವ ಮತ್ತು ನಮ್ಮ ನಿಜ ಸ್ವರೂಪವನ್ನು ತೋರಿಸಿಕೊಡುವ,ಈ ವಿಚಾರಮಾರ್ಗ ಮತ್ತು ಜ್ಞಾನಧಾರೆಯೇ ಮಹರ್ಷಿಗಳ ವಾಣಿ. ಯಾರು ಇದನ್ನು ಶ್ರದ್ಧೆಯಿಂದ ಗ್ರಹಿಸುತ್ತಾರೋ ಅವರು ಮಹರ್ಷಿಗಳ ಆಶಿರವಾದಕ್ಕೆ ಅರ್ಹರಾಗುತ್ತಾರೆ

...............................................

# ಗೀತಾ ಮಣಿ ಮಾಲೆ

ಮೂಲ ಪ್ರತಿ
ರಮಣ ಆಶ್ರಮ.
ತಿರುವಣ್ಣಾಮಲೈ

ಕನ್ನಡ
ಭಾವಾರ್ಥದೊಂದಿಗೆ
ರಾಧಾಕಷ್ಣನ್ ಗರಣಿ

ಗೀತಾ ಮಣಿ ಮಾಲೆ
ಭಗವಾನ್ ರಮಣ ಮಹರ್ಷಿ
ವೈಶಾಖ ಕೃಷ್ಣ ಏಕಾದಶಿ ೨೦೨೧
೦೫-೦೬-೨೦೩೧

ಕನ್ನಡಕ್ಕೆ
ರಾಧಾಕೃಷ್ಣನ್   ಗರಣಿ

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ||
ಅನೇಕ ಜನ್ಮಗಳ ಕೊನೆಯಲ್ಲಿ ಜ್ಞಾನ ಸುದ್ದಿಯನ್ನು ಹೊಂದಿದವನು ನನ್ನನ್ನು ಪಡೆಯುವನು. ವಾಸುದೇವ ನೇ ಸರ್ವಸ್ವ ಎಂದು  ತಿಳಿದ ಶುದ್ಧ ಮನಸ್ಸುಳ್ಳ ಮಹಾತ್ಮನು ಸಿಗುವುದು ದುರ್ಲಭ

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ಅಹಂ
ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ||
ಎಲ್ಲಾ ಅನಾತ್ಮ ಧರ್ಮಗಳನ್ನು ತ್ಯಜಿಸಿ ಕೇವಲ ನನಗೆ ಶರಣಾಗು. ನಾನು ನಿನ್ನನ್ನು ಎಲ್ಲಾ ಪಾಪಗಳಿಂದ ಮುಕ್ತಗೊಳಿಸುತ್ತೇನೆ. ಶೋಕಿಸಬೇಡ

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋ,,ಸಿ ಮೇ ||
ನನ್ನನ್ನು ಚಿಂತಿಸು, ನನ್ನ ಭಕ್ತನಾಗು, ನನ್ನನ್ನು ಆರಾಧಿಸು, ನನಗೆ ನಮಸ್ಕರಿಸು. ಆಗ ಖಂಡಿತವಾಗಿಯೂ ನನ್ನಲ್ಲಿಗೆ ಬರುವೆ. ನನಗೆ ಪ್ರಿಯನಾದ್ದರಿಂದ ನಿನಗೆ ಈ ಭರವಸೆಯನ್ನು ಕೊಡುತ್ತೇನೆ

ಈಶ್ವರನ ಅವತಾರ ಸ್ವರೂಪರಾದ  ಭಗವಾನ್
ರಮಣಮಹರ್ಷಿಗಳ ಪಾದಾರವಿಂದಗಳಲ್ಲಿ  ಸಮರ್ಪಿತ

# ಪ್ರಸ್ತಾವನೆ.

ಭಗವಾನ್ ರಮಣರ ಆಶ್ರಮಕ್ಕೆ ಬಂದ ಒಬ್ಬ ಪಂಡಿತರೊಂದಿಗೆ,, ಭಗವಾನರು ಭಗವದ್ಗೀತೆಯ ಮಹತ್ವದ ಬಗ್ಗೆ ವಿವರಿಸುತ್ತಿದ್ದಾಗ, ಅಲ್ಲಿ ಬಂದ ಒಬ್ಬ ಭಕ್ತರು ಅವರಲ್ಲಿ ವಿಶೇಷವಾದ ಒಂದು ಕೋರಿಕೆಯನ್ನು ಇಟ್ಟರು. ಏಳುನೂರು ಶ್ಲೋಕಗಳ ಮನನ ಕಷ್ಟಕರವಾದ್ದದ್ದು. ಒಂದೇ ಒಂದು ಶ್ಲೋಕದಿಂದ ಗೀತೆಯ ಸಾರವನ್ನೆಲ್ಲ ಮನನ ಮಾಡುವುದಕ್ಕೆ ಸಾಧ್ಯವೇ ಎಂದು ಕೇಳಿದ ಕೂಡಲೇ, ಭಗವಾನರು ಗೀತೆಯ ಹತ್ತನೆಯ ಅಧ್ಯಾಯದ ಇಪ್ಪತ್ತನೆಯ ಶ್ಲೋಕವನ್ನು ಮನನ ಮಾಡಿದರೆ ಸಾಕು ಎಂದರಂತೆ.

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ || ಗೀತಾ 10.20

ಇದರ ಸಾರಾಂಶ ಈ ರೀತಿ.
"ನಾನು ಸಮಸ್ತ ಜೀವಿಗಳ ಮತ್ತು ಜಂತುಗಳ ಹೃದಯದಲ್ಲಿ ನೆಲೆಸಿರುವವ ಮತ್ತು ನಾನೇ ಎಲ್ಲಕ್ಕೂ ಆದಿ ಮಧ್ಯ ಅಂತ್ಯ. ಸೃಷ್ಟಿ ಸ್ಥಿತಿ ಮತ್ತು ಲಯಗಳಿಗೆ ನಾನೇ ಕಾರಣ*
ಇದನ್ನು ನೆನಪಿನಲ್ಲಿಟ್ಟು ಸದಾ ಧ್ಯಾನ ಮಾಡು ಎಂದರಂತೆ. (ಮಣಿಮಾಲೆಯ ನಾಲ್ಕನೆಯ ಶ್ಲೋಕ )

ನಂತರ ತಾವೇ, ಭಗವದ್ಗೀತೆಯಿಂದ ನಲವತ್ತೆರಡು ಶ್ಲೋಕಗಳನ್ನು ಆರಿಸಿ,ಅವುಗಳನ್ನು ಒಂದು ಕ್ರಮದಲ್ಲಿ ಜೋಡಿಸಿ

ಅದನ್ನು ದಯಪಾಲಿಸಿದರು. ಇದನ್ನು ತಮಿಳು ಮತ್ತು ಮಲಯಾಳಂ ಭಾಷೆಗಳಲ್ಲಿ ಕೂಡ ಅವರೇ ಯೋಜಿಸಿದರು. ಇದರ ಸಂಸ್ಕೃತದ ಪ್ರತಿಯನ್ನು ವಿಶ್ಲೇಷಣೆಯೊಂದಿಗೆ, ಆಗಿನ ರಮಣಾಶ್ರಮದ ಅಧ್ಯಕ್ಷರಾದ ನಿರಂಜನಾನಂದ ಸ್ವಾಮಿಗಳು ಬಿಡುಗಡೆ ಮಾಡಿ 1951 ರ ಹೊತ್ತಿಗೆ ಇದು, ಐದು ಪುನರ್ ಮುದ್ರಣಗಳು ಆದವು.

ಇದನ್ನು ಕನ್ನಡ ತಿಳಿದ ಮುಮುಕ್ಷುಗಳಿಗೆ ತಲುಪಿಸಲು ಒಂದು ಪ್ರಯತ್ನವನ್ನು ಮಾಡಿದ್ದೇನೆ. ಹಂತಹಂತವಾಗಿ ಮನದಟ್ಟಾಗುವ ರೀತಿಯಲ್ಲಿ ಭಗವಾನರು ಈ ಶ್ಲೋಕಗಳನ್ನು ಜೋಡಿಸಿ, ಮುಮುಕ್ಷುವಿನ ಸಂದೇಹದ ನಿವಾರಣೆಗೆ ಒತ್ತು ಕೊಟ್ಟಿದ್ದಾರೆ. ಶ್ಲೋಕ ಮತ್ತು ಭಾವಾರ್ಥಗಳ ಜೊತೆಗೆ ವಿಶ್ಲೇಷಣೆ ಮುಂದೆ ಕೊಡಲಾಗಿದೆ. ನಂತರ,,ಸ್ವಲ್ಪ ವಿಶ್ಲೇಷಣೆಯನ್ನು ಸೇರಿಸಲಾಗಿದೆ. ಇದನ್ನು ಮನನ ಮಾಡಿ, ಅದರ ಅಭ್ಯಾಸವನ್ನು ಜೀವನದಲ್ಲಿ ಅಳವಡಿಸಿ ಕೊಂಡಾಗ, ರಮಣ ಮಹರ್ಷಿಗಳ ಕೃಪಾಕಟಾಕ್ಷವೂ ಮುಮುಕ್ಷುಗಳಲ್ಲಿ ನಿರಂತರವಾಗಿ ಇರುವುದು ಎಂಬುದರಲ್ಲಿ ಯಾವ ರೀತಿಯ ಸಂದೇಹವೂ ಇಲ್ಲ.

ವಿಶ್ಲೇಷಣೆ ಮಾಡುವ, ಅಂತಹ ಪರಿಶ್ರಮ ನನಗೆ ಇಲ್ಲದಿದ್ದರೂ, ನನ್ನ ಧೀ ಶಕ್ತಿಗೆ ಅನುಗುಣಾಗಿ ನಾಲ್ಕು ಮಾತುಗಳಲ್ಲಿ ಸರಳವಾಗಿ ಮಂಡಿಸಿದ್ದೇನೆ. ಬೇರೆ ಗ್ರಂಥಗಳನ್ನು ಅವಲೋಕನ ಮಾಡಿ ಹೆಚ್ಚಿನ ವಿವರ ತಿಳಿದುಕೊಂಡು, ಅಭ್ಯಾಸದಲ್ಲಿ ತೊಡಗುವುದು ಉತ್ತಮ. ಎಲ್ಲಾ ತಪ್ಪು ಒಪ್ಪುಗಳಿಗೂ ನಾನೇ ಹೊಣೆ.

# ನಲವತ್ತೆರಡು ಶ್ಲೋಕಗಳು

ಭಗವಾನ್ ರಮಣರು ಆರಿಸಿ ಜೋಡಿಸಿದ ಶ್ಲೋಕಗಳು

ಈ ನಲವತ್ತೆರಡು ಶ್ಲೋಕಗಳು,ಏಳುನೂರು ಶ್ಲೋಕಗಳಿಂದ ಆಯ್ದ ಮುತ್ತು ರತ್ನಗಳು. ಇವು,ಅತ್ಯಂತ ಗಹನವಾದದ್ದು, ಕೂಡ. ಇವುಗಳನ್ನು ಮೇಲ್ನೋಟಕ್ಕೆ ಓದಿಬಿಟ್ಟು ಬಿಡ ಬಾರದು.

ನನ್ನ ಬರಹಗಳಲ್ಲಿ ಒತ್ತಿ ಹೇಳುತ್ತಿರುವುದು ಏನೆಂದರೆ, ಶ್ರುತಿ ಮತ್ತು ಸ್ಮೃತಿಗಳ ವಾಕ್ಯಗಳನ್ನು, ದೀರ್ಘ ಚಿಂತನೆಯಿಂದ, ಪ್ರತಿಯೊಂದು ಶ್ಲೋಕಗಳ ಮತ್ತು ಅದರಲ್ಲಿನ ಪದದ ಗೂಢ ಅರ್ಥವನ್ನು ತಿಳಿಯಬೇಕು. ಒಂದೊಂದು ವಾಕ್ಯವೂ ಕಬ್ಬಿನ ಜಲ್ಲೆಯ ರೀತಿ ಇದೆ. ಅದು,ಬಹಳ ಸಾರವತ್ತು ಆದದ್ದು.(ಇಕ್ಷು ದಂಡ ಸಾರವತ್). ಆದ್ದರಿಂದ, ಅದರ ರಸವನ್ನು ಹಿಂಡಿ, ಅ ರಸವನ್ನು ಅನುಭವಿಸದ ಹೊರತು, ನೀವು ಅ ಒಂದು ಆನಂದ ಸಾಗರದಲ್ಲಿ ಇರಲು ಆಗದು.

ದಯವಿಟ್ಟು, ಇದನ್ನು ಗಮನದಲ್ಲಿ ಇಟ್ಟು, ಮುಂದಿನ ಶ್ಲೋಕಗಳ ಉಪಯೋಗ ಪಡೆಯಿರಿ.

"ಜ್ಞಾನಾತ್ ಏವ ಬ್ರಹ್ಮ ಪ್ರಾಪ್ತಿ." ಎಂಬ ಶ್ರೀ ಶಂಕರರ ವಾಣಿಯೇ, ಭಗವಾನರು. ಆಚರಿಸುತ್ತಿದ್ದ ಮತ್ತು ತೋರುತ್ತಿದ್ದ ಮಾರ್ಗ. ಜ್ಞಾನ ಮಾರ್ಗವೇ ಅತ್ಯಂತ ಶ್ರೇಷ್ಠವಾದದ್ದು ಎಂಬುದು ಅವರ ಅನಿಸಿಕೆ, ಏಕೆಂದರೆ, ಕರ್ಮ ಮಾರ್ಗವು, ಫಲಾಪೇಕ್ಷೆಗಳು, ತುಂಬಿರುವ ಹಾದಿ. ಇದನ್ನು, ಚಿತ್ತ ಶುದ್ಧಿಗಾಗಿ ಬಳಸಿಕೊಳ್ಳಬೇಕೇ ಹೊರತು, ಅದರಿಂದ, ಶಾಶ್ವತ ಸುಖ ಸಿಗಲಾರದು, ಎಂಬುದು ತಾತ್ಪರ್ಯ.

ಶ್ಲೋಕಗಳ ಪದವಿಭಾಗ ಮಾಡದೇ ಇರುವುರಿಂದ, ನೀವು ಮೂಲ ಗ್ರಂಥವನ್ನು ಇಟ್ಟು ನೋಡಿದಾಗ ನಿಮಗೆ ಬೇಕಾದ ಎಲ್ಲಾ ಭಾಗಗಳು ಮತ್ತು ಅದರ ಪ್ರಾಮುಖ್ಯತೆ ದೊರೆಯುವ ಸಾಧ್ಯತೆ ಇದೆ. ಆಗ ಅರ್ಥ ಸ್ಪಷ್ಟವಾಗಿ ತಿಳಿಯುತ್ತದೆ. ಇದಕ್ಕಾಗಿ, ಶ್ಲೋಕಗಳ ಕಡೆಯಲ್ಲಿ ಭಗವದ್ಗೀತೆಯಲ್ಲಿನ ಅಧ್ಯಾಯ ಮತ್ತು ಶ್ಲೋಕವನ್ನು ಸೂಚಿಸಲಾಗಿದೆ.

ಅರ್ಜುನನನ್ನು ನಿಮಿತ್ತನನ್ನಾಗಿ ಮಾಡಿಕೊಂಡು, ಭಗವಾನರು, ನಮ್ಮೆಲ್ಲರಲ್ಲಿಯೂ ಅರ್ಜುನನಂತೆಯೇ, ಧರ್ಮ ಸೂಕ್ಷ್ಮತೆ, ಪಾಪಪ್ರಜ್ಞೆ, ಆಚರಣೆ ಮಾಡದಿದ್ದರೆ ಆಗಬಹುದಾದ ಮನಸ್ಸಿನ ಸಂಕುಚಿತ ಭಾವನೆಯನ್ನು, ಸುಖ ದುಃಖಗಳ ಮಹಾಪೂರ, ಮುಂತಾದುವುಗಳನ್ನು ಮೂಲವಾಗಿ ಇಟ್ಟುಕೊಂಡು, ಇದಕ್ಕೆ ಉಪಾಯವನ್ನು ಮುಂದೆ ಸೂಚಿಸುತ್ತಾರೆ.

೧. ಸಂಜಯ ಉವಾಚ
ತಂ ತಥಾ ಕೃಪಯಾವಿಷ್ಟಮ್ ಅಶ್ರುಪೂರ್ಣಾಕುಲೇಕ್ಷಣಂ |
ವಿಷೀದಂತಮಿದಂ ವಾಕ್ಯಮಮ್ ವಾಚ ಮಧುಸೂದನಃ || **2.1**

ಸಂಜಯನು ಹೇಳಿದನು "ಕರುಣೆಯಿಂದ ತುಂಬಿ, ಕಂಬನಿ ತುಂಬಿದ, ದುಃಖಿತನಾದ ಅರ್ಜುನನನ್ನು ನೋಡಿ ಮಧುಸೂದನನು ಹೀಗೆ ಹೇಳಿದನು

ಎರಡನೆಯ ಮತ್ತು ಮೂರನೆಯ ಶ್ಲೋಕದಲ್ಲಿ ಶರೀರ ಮತ್ತು ಅದರಲ್ಲಿ ವಾಸಿಸುವ ಶಾರೀರಿಯ ಬಗ್ಗೆ ಕೂಲಂಕಶವಾಗಿ ತಿಳಿಸಲಾಗಿದೆ.. ಕ್ಷೇತ್ರ ಯಾವುದು ಮತ್ತು ಕ್ಷೇತ್ರಜ್ಞ ಯಾರು ಎಂಬ ತಿಳಿವಳಿಕೆಯನ್ನು ಯಾರು ಹೊಂದುತ್ತಾರೆಯೋ, ಅವರು ನಿಜವಾಗಿ ಜ್ಞಾನಿ ಎಂದು ಭಗವಂತನು ಸಮರ್ಥಿಸುತ್ತಾನೆ

೨. ಶ್ರೀಭಗವಾನುವಾಚ
ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ

ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ || **13.2**

ಭಗವಂತನು ಹೇಳಿದನು "ಕೌಂತೇಯ! ಈ ದೇಹವನ್ನು ಕ್ಷೇತ್ರವೆಂದು ಕರೆಯಲಾಗಿದೆ, ಇದನ್ನು ಯಾರು ತಿಳಿಯುತ್ತಾನೋ ಅವನನ್ನು ಕ್ಷೇತ್ರಜ್ಞ ಎಂದು ವೇದಾಂತಿಗಳು ಕರೆಯುವರು".

೩. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ |
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತತ್ ಜ್ಞಾನಂ ಮತಂ ಮಮ **13.3**
ಭರತವಂಶ ಶ್ರೇಷ್ಠನೇ! ಎಲ್ಲಾ ಕ್ಷೇತ್ರಗಳ ಕ್ಷೇತ್ರಜ್ಞನು ನಾನೇ ಎಂದು ತಿಳಿ. ಈ ದೇಹವನ್ನು ಮತ್ತು ಕ್ಷೇತ್ರಜ್ಞನನ್ನು ತಿಳಿಯುವುದೇ ಜ್ಞಾನವು ಎಂದು ನನ್ನ ಅಭಿಪ್ರಾಯ
( ಕ್ಷೇತ್ರ ಮತ್ತು ಕ್ಷೇತ್ರಜ್ಞ ನಂತೆ ತೋರುವ ಈಶ್ವರ -ಇವರ ತತ್ವವನ್ನು ಬಿಟ್ಟರೆ. ಜ್ಞಾನಕ್ಕೆ ವಿಷಯ ವಾದದ್ದು. ಮತ್ತೆ ಯಾವುದೂ ಉಳಿಯುವುದಿಲ್ಲ )

ಶ್ಲೋಕ, ನಾಲ್ಕರಿಂದ ಹನ್ನೆರಡರವರೆಗೆ, ಆತ್ಮನ ಮಹತ್ವ ಮತ್ತು ಪ್ರಶಂಸೆ ಇದೆ. ನಾವು ಆಡುವ ಭಾಷೆಯಲ್ಲಿ "ಅವನು ಸತ್ತುಹೋದ" ಅಥವಾ "ಅವನ ಸತ್ತು ಹೋಯಿತು" ಎಂದು ಹೇಳಿದಾಗ, ನಮ್ಮಲ್ಲೇ ಇದ್ದ ಯಾರೋ ಒಬ್ಬ ದೇಹವನ್ನು ಬಿಟ್ಟಿದ್ದರಿಂದ, ದೇಹಪಾತವಾಯಿತು ಎಂದು ತಿಳಿಯುತ್ತದೆ. ರಾಧಾಕೃಷ್ಣ ಎಂದು ನಾಮ ಸಂಕೇತವಾದ ದೇಹದಲ್ಲಿ, ಇನ್ನೊಬ್ಬರು ಇದ್ದರು ಎಂಬ ಸೂಚನೆ ತಿಳಿಯುತ್ತದೆ. ಹಾಗಾದರೆ ಈ ಸತ್ ಅಥವಾ ಸತ್ತು ಯಾರು? ಅವನ ಮಹತ್ವ ಏನು ? ಅವನ ಗುಣಗಳೇನು? ಇದನ್ನು ತಿಳಿದಾಗಲೇ ನಮಗೆ ಸೂಕ್ಷ್ಮ ವಿಚಾರಗಳು ಎದ್ದು ಮೂಡುತ್ತವೆ.
ಭಗವಾನ್ ರಮಣರು, ಉತ್ತಮ ಮಟ್ಟದಿಂದ ಕೆಳಕ್ಕೆ ಉಳಿಯುತ್ತಾ ಬಂದು, ಕಡೆಗೆ ನಮ್ಮನ್ನು ಅದೇ ಮೆಟ್ಟಲುಗಳನ್ನು ಹತ್ತಲು ಪ್ರೇರೇಪಿಸುತ್ತಾರೆ. ಮೊದಲು ದೇಹದ ಬಗ್ಗೆ ತಿಳಿದು ನಂತರ ಅದರ ಮಾಲೀಕನ ಬಗ್ಗೆ ತಿಳಿದುಕೊ( ಶ್ಲೋಕ ೩ ಮತ್ತು೪)
ದೇಹವು ಪಂಚಭೂತಗಳಿಂದ ಆದದ್ದು,. ಅದು ಕಾಲದ ನಿಯಮಕ್ಕೆ ಒಳಪಟ್ಟಿದೆ. ಅದಕ್ಕೆ ಶಕ್ತಿ ಇದ್ದರೆ ಮಾತ್ರ ವರ್ಧಿಸುತ್ತದೆ. ಇಲ್ಲದಿದ್ದಲ್ಲಿ ನಶಿಸಿಹೋಗುತ್ತದೆ. ( ಶ್ಲೋಕ೫)

ಆತ್ಮನ ಬಗ್ಗೆ ವಿವರಣೆ ಮತ್ತು ಪ್ರಶಂಸೆ ಮುಂದಿನ ಮೂರು ಶ್ಲೋಕಗಳಲ್ಲಿ ತಿಳಿಸಲಾಗಿದೆ (೭ -೧೦) ಹನ್ನೊಂದು ಮತ್ತು ಹನ್ನೆರಡು ಶ್ಲೋಕಗಳಲ್ಲಿ, ಆತ್ಮದ ನೆಲೆಯನ್ನು ನಿಖರವಾಗಿ ತಿಳಿಸಲಾಗಿದೆ.

೪. ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ **|| 10.20**
ಗುಡಾಕೇಶ! (ನಿದ್ದೆ, ತಮೋಗುಣ ಅಜ್ಞಾನಗಳನ್ನು ಗೆದ್ದವ), ನಾನು ಎಲ್ಲಾ ಜೀವಿಗಳ ಹೃದಯದಲ್ಲಿ ನೆಲೆಸಿರುವ ಪರಮಾತ್ಮನು. ನಾನು ಜೀವಿಗಳೆಲ್ಲದರ ಮೂಲನೂ, ಮಧ್ಯವೂ ಮತ್ತು ಅಂತ್ಯವೂ ಆಗಿದ್ದೇನೆ (ಸಮಸ್ತ ಪ್ರಾಣಿಗಳ ಉತ್ಪತ್ತಿ -ಸ್ಥಿತಿ ಮತ್ತು ಲಯಗಳಿಗೆ ಕಾರಣನಾದವನು )

೫. ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ |
ತಸ್ಮಾದಪರಿಹಾರ್ಯೇ,,ರ್ಥೇ ನ ತ್ವಂ ಶೋಚಿತುಮರ್ಹಸಿ **|| 2.27**
ಹುಟ್ಟಿದವನಿಗೆ, ಮೃತ್ಯು ನಿಶ್ಚಯವಾಗಿ ಇರುವುದು. ಸತ್ತಮೇಲೆ ಜನ್ಮವೂ ನಿಶ್ಚಯವಾಗಿ ಇರುವುದು ಅಲ್ಲವೇ. ಹೀಗೆ ಇರುವುದರಿಂದ, ಪರಿಹಾರ ಇಲ್ಲದ ಈ ಅರ್ಥದಲ್ಲಿ ನೀನು ಶೋಕೀಡಬಾರದು

೬. ನ ಜಾಯತೇ ಮ್ರಿಯತೇ ವಾ ಕದಾ ಚಿನ್ ನಾಯಂ ಭೂತ್ವಾ ಭವಿತಾ ವಾ ನ ಭೂಯಃ |
ಅಜೋ ನಿತ್ಯಃ ಶಾಶ್ವತೋ,,ಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ || **2.20**
ಆತ್ಮ ಎಂಬುದು, ಎಂದಿಗೂ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಆತ್ಮ ಹಿಂದೆ ( ಮೊದಲು)ಇದ್ದು, ಆಮೇಲೆ ಇಲ್ಲದೆ ಇರುವುದು ಕೂಡ ಇಲ್ಲ. ದೇಹವನ್ನು ಕೊಂದಾಗ ಅದು ಸಾಯುವುದಿಲ್ಲ. ಅದು ಜನ್ಮರಹಿತ, ನಿತ್ಯ, ಶಾಶ್ವತ, ಪುರಾತನವಾದದ್ದು

೭ ಅಚ್ಛೇದ್ಯೋ„ಯಮ್ ಅದಾಹ್ಯೋ„ಯಮ್ ಅಕ್ಲೇದ್ಯೋ„ಶೋಷ್ಯ ಏವ ಚ |
ನಿತ್ಯಃ ಸರ್ವಗತಃ ಸ್ಥಾಣುರಚಲೋ„ಯಂ ಸನಾತನಃ ||
**2.24**

ಆತ್ಮವನ್ನು ಛೇದಿಸಲಾಗದು, ನೀರಿನಲ್ಲಿ ಕರಗಿಸಲಾಗದು, ದಹಿಸಲಾಗದು, ಒಣಗಿಸಲಾಗದು. ಆತ್ಮವು ನಿತ್ಯವೂ, ಎಲ್ಲೆಡೆಯೂ ಇರುವಂತಹದ್ದು, ಬದಲಾವಣೆಯಿಲ್ಲದ್ದು, ಸ್ಥಿರವಾದದ್ದು, ಶಾಶ್ವತವಾದದ್ದು

೮. ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ |
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ || **2.17**

ಯಾವುದರಿಂದ ಇದೆಲ್ಲವೂ ವ್ಯಕ್ತ ಆಗಿದೆಯೋ,(ದೇಹವೆಲ್ಲಾ ವ್ಯಾಪಿಸಿ ಇದೆಯೋ) ಅದು ಅವಿನಾಶಿ ಎಂದು ನೀನು ತಿಳಿಯಬೇಕು. ನಾಶವಿಲ್ಲದ ಆತ್ಮವನ್ನು ಯಾರೂ ನಾಶಮಾಡಲು ಆಗುವುದಿಲ್ಲ.

೯.ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ
ಉಭಯೋರಪಿ ದೃಷ್ಟೋ„ಂತಃ ತ್ವನಯೋಸ್ತತ್ತ್ವದರ್ಶಿಭಿಃ || **2.16**

ನಾಸತೋ ಎಂದರೆ, ಅಚೇತನ ರೂಪವಾದ ದೇಹಕ್ಕೆ, ಅಸ್ತಿತ್ವ ಇಲ್ಲ. ಸತ್ ಎಂದರೆ ಆತ್ಮ. ಆತ್ಮನಿಗೆ ಯಾವ ನಾಶವೂ ಇಲ್ಲ. ನಿಜವಾಗಿ ಇಲ್ಲದಿರುವುದಕ್ಕೆ, ಇರುವಿಕೆ ಹುಟ್ಟುವುದಿಲ್ಲ. (ಹಗ್ಗದಲ್ಲಿ ಹಾವನ್ನು ಕಂಡಂತೆ) ಇರುವುದು ಒಂದೇ ಆತ್ಮ. ಅದಕ್ಕೆ ಹುಟ್ಟು ಇಲ್ಲಾ, ಸಾವೂ ಇಲ್ಲ ಈ ವ್ಯತ್ಯಾಸವನ್ನು ತಿಳಿದುಕೊಂದವ ದಾರ್ಶನಿಕ.

* ರಜ್ಜುವಿನಲ್ಲಿ, ಸರ್ಪ... ಇಲ್ಲದಂತೆ... ಇರುವುದು ಅರಿವು , ನಮ್ಮೊಳಗೆ... ಭ್ರಾಂತಿ ಭಾವಕ್ಕೆ ಮೂಲ { ಸ್ವ ಸ್ವರೂಪ }..

* ಅನುಬಂಧ. ೧ ನೋಡಿ

೧೦. ಯಥಾ ಸರ್ವಗತಂ ಸೌಕ್ಷ್ಮ್ಯಾತ್ ಆಕಾಶಂ ನ ಉಪಲಿಪ್ಯತೇ
ಸರ್ವತ್ರ ಅವಸ್ಥಿತೋ ದೇಹೇ ತಥಾ ಆತ್ಮಾ ನ ಉಪಲಿಪ್ಯತೇ ||
**13.32**

ಹೇಗೆ ಆಕಾಶವು, ಎಲ್ಲೆಡೆ ವ್ಯಾಪಿಸಿದ್ದರೂ ಸೂಕ್ಷ್ಮ ರೂಪದಿಂದ ಯಾವುದರೊಂದಿಗೂ ಬೆರೆಯವುದಿಲ್ಲವೋ, ಅದರಂತೆಯೇ ಆತ್ಮ, ದೇಹದ ಎಲ್ಲಾ ಕಡೆಗಳಲ್ಲಿ ನೆಲೆಸಿದ್ದರೂ ಬೆರೆಯುವುದಿಲ್ಲ
ಆಕಾಶದ ವಿವರಣೆಗೆ ಅನುಬಂಧ ೨ ರಲ್ಲಿ ನೋಡಿ

೧೧. ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ |
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ || **15.6**

ಎಲ್ಲಿ ಸೂರ್ಯ, ಚಂದ್ರ, ಅಗ್ನಿ ಯಾವುದೂ ಪ್ರಕಾಶಿಸುವುದಿಲ್ಲವೋ, ಎಲ್ಲಿ ಹೋದರೆ ಮತ್ತೆ ಹಿಂದಿರುಗುವುದಿಲ್ಲವೋ ಅದು ನನ್ನ ಪರಮ ಧಾಮವು

೧೨. ಅವ್ಯಕ್ತೋ„ಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ |
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ || **8.21**

ಯಾವುದನ್ನು ಅವ್ಯಕ್ತವೆಂದು, ಅಕ್ಷರವೆಂದು ಹೇಳಲಾಗಿದೆಯೋ, ಯಾವುದನ್ನು ಪರಮಗತಿಯೆಂದು ತಿಳಿಯಲಾಗಿದೆಯೋ, ಯಾವ ಸ್ಥಾನವನ್ನು ತಲುಪಿ ಮತ್ತೆ ಹಿಂದಿರುಗುವುದಿಲ್ಲವೋ, ಅದು ನನ್ನ ಪರಮೋನ್ನತ ನಿವಾಸವಾಗಿದೆ

ಶ್ಲೋಕ ಹದಿಮೂರರಿಂದ ಹದಿನೆಟನೆರವರೆಗೆ ನಾವು ಯಾವ ರೀತಿಯಲ್ಲಿ ಜ್ಞಾನ ಸಂಪಾದನೆ ಮಾಡಿದರೆ ಶಾಂತಿಯನ್ನು ಹೊಂದಬಹುದು ಎಂಬುದನ್ನು ವಿವರಿಸಲಾಗಿದೆ

ಅವ್ಯಕ್ತ,, ಅಕ್ಷರ, ಎಂಬ ಪದಗಳ ಬಳಕೆಗೆ ವಿವರಣೆಯನ್ನು ಅನುಬಂದ-೩ ರಲ್ಲಿ ನೋಡಿ

೧೩. ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮ ನಿತ್ಯಾ ವಿನಿವೃತ್ತಕಾಮಾಃ |
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ || **15.5**

ಗರ್ವ, ಮೋಹಗಳಿಲ್ಲದ, ಸಹವಾಸ ದೋಷಗಳನ್ನು ಗೆದ್ದ, ಸದಾ ಅಧ್ಯಾತ್ಮದಲ್ಲಿ ನಿರತರಾದ, ಕಾಮನೆಗಳನ್ನು ತ್ಯಜಿಸಿದ, ಸುಖ-ದುಃಖ ಎಂಬ ದ್ವಂದ್ವಗಳಿಂದ ಮುಕ್ತರಾದ, ದಿಗ್ಭ್ರಮೆಗೊಳ್ಳದವರು ಆ ಶಾಶ್ವತ ತಾಣವನ್ನು ಹೊಂದುತ್ತಾರೆ

೧೪. ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ || **16.23**

ಯಾರು ಶಾಸ್ತ್ರದ ( ವೇದ ಮತ್ತು ವೆದಾಂಗಗಳು) ನಿಯಮಗಳನ್ನು ತ್ಯಜಿಸಿ ತನ್ನಿಚ್ಛೆಯಂತೆ ವರ್ತಿಸುತ್ತಾನೋ ಆಂತಹವನು ಎಂದಿಗೂ ಪರಿಪೂರ್ಣತೆಯನ್ನು, ಸುಖವನ್ನು ಅಥವಾ ಪರಮಗತಿಯನ್ನು ಹೊಂದಲಾರ.

೧೫. ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ || **13.28**

ಯಾರು ಎಲ್ಲಾ ಜೀವಿಗಳಲ್ಲಿ ವಾಸಿಸುತ್ತಿರುವ ಪರಮಾತ್ಮನನ್ನು ಮತ್ತು ವಿನಾಶವಾದವುಗಳಲ್ಲಿ ವಿನಾಶವಾಗದವನನ್ನು ಸಮಾನವಾಗಿ ಕಾಣುತ್ತಾನೋ ಅವನು ನಿಜವಾಗಿಯೂ ಕಾಣುತ್ತಾನೆ.

೧೬. ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋ,,ರ್ಜುನ
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ || **11.54**

ಪರಂತಪ! (ಶತ್ರುಗಳನ್ನು ನಾಶ ಮಾಡಬಲ್ಲ ಅರ್ಜುನನೇ) ಅನನ್ಯ (ಏಕಚಿತ್ತದ) ಭಕ್ತಿಯಿಂದ ಮಾತ್ರ ನನ್ನನ್ನು ಈ ರೀತಿಯಾಗಿ ನೋಡಲು, ತತ್ತ್ವದಿಂದ ಅರ್ಥಮಾಡಿಕೊಳ್ಳಲು ಮತ್ತು ನನ್ನನ್ನು ಪ್ರವೇಶಿಸಲು (ಸೇರಲು) ಸಾಧ್ಯ.

೧೭. ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ |
ಶ್ರದ್ಧಾಮಯೋ,,ಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ || **17.3**

ಭರತವಂಶಜನೇ! ಪ್ರತಿಯೊಬ್ಬನು ಪ್ರಕೃತಿ ಗುಣಗಳಿಗೆ ಅನುಸಾರವಾದ ಶ್ರದ್ಧೆಯನ್ನು (ಸತ್ವಾನುರೂಪ ಉಳ್ಳ) ಹೊಂದುವನು. ಈ ಪುರುಷನು ಶ್ರದ್ಧಾಮಯನು. ಜೀವಿಯು ಯಾವ ಶ್ರದ್ಧೆಯುಳ್ಳವನೋ, ಅವನೂ ಅವನೇ. (ಅದರ ದೇಹಧಾರಿಯೂ ಅದೇ ಶ್ರದ್ಧೆ, ಯುಳ್ಳವನೆ  ಆಗುತ್ತಾನೆ)

೧೮. ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತ್  ಇಂದ್ರಿಯಃ |
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ || **4.39**

ನಿಯಂತ್ರಿತ ಇಂದ್ರಿಯ ಸಂಯಮ ಗಳಿಂದ ಕೂಡಿದ ಶ್ರದ್ಧಾವಂತನೂ, ತತ್ಪರನೂ ಆಗಿರುವಾತನು, (ದಿವ್ಯ ಜ್ಞಾನದಲ್ಲೇ ಆಸಕ್ತನಾದವನು) ಜ್ಞಾನವನ್ನು ಹೊಂದುವನು.  ನಂತರ, ಶೀಘ್ರವಾಗಿ ಅಧ್ಯಾತ್ಮಿಕ ಶಾಂತಿಯನ್ನು ಪಡೆಯುವನು

ಜ್ಞಾನಿಯಾದವ, ಯಾವ ರೀತಿಯಲ್ಲಿ ಮತ್ತು ಹೇಗೆ ಇರಬೇಕು, ಹೇಗೆ ಇದ್ದರೆ ಪರಮ ಪದವನ್ನು ಹೊಂದಬಹುದು, ಎಂಬುದನ್ನು ಶ್ಲೋಕ ೧೯,೨೦,೨೧ ರಲ್ಲಿ ತಿಳಿಸಲಾಗಿದೆ

೧೯. ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿ ಪೂರ್ವಕಂ |
ದದಾಮಿ ಬುದ್ಧಿಯೋಗಂ ತಂಯೇನ ಮಾಮುಪಯಾಂತಿ ತೇ || **10.10**

ಪ್ರೇಮ ಭಾವದಿಂದ, ಸತತವಾಗಿ ಭಜಿಸುತ್ತಿರುವ (ಭಕ್ತಿಸೇವೆಯಲ್ಲಿ ನಿರತರಾದ) ಅವರಿಗೆ, ನನ್ನ ಬಳಿಗೆ ಬರಲು,ಬೇಕಾದ ನೈಜ ಬುದ್ಧಿಯನ್ನು ನೀಡುತ್ತೇನೆ

೨೦. ತೇಷಾಮೇವಾನುಕಂಪಾರ್ಥಂ ಅಹಮಜ್ಞಾನಜಂ ತಮಃ |
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ || **10.11**

ಅವರಿಗೆ ವಿಶೇಷವಾದ ದಯೆಯನ್ನು ತೋರಲು ನಾನು ಅವರ ಹೃದಯಗಳಲ್ಲಿ ನೆಲೆಸಿ, ಜ್ಞಾನದ ದೀಪದಿಂದ, ಆತ್ಮಭಾವದಿಂದ ಪ್ರಕಾಶಿಸುತ್ತಾ ಅಜ್ಞಾನದ ಅಂಧಕಾರವನ್ನು(ತಮಸ್ಸನ್ನು) ನಾಶ ಮಾಡುತ್ತೇನೆ.

೨೧. ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ
ತೇಷಾಮಾದಿತ್ಯವತ್ ಜ್ಞಾನಂ ಪ್ರಕಾಶಯತಿ ತತ್ಪರಂ || **5.16**

ಆದರೆ, ಯಾರಿಗೆ, ಆ ಆತ್ಮನ ಅಜ್ಞಾನವು, ಜ್ಞಾನದಿಂದ ನಾಶವಾಗಿರುವುದೋ, ಅವರಿಗೆ, ಸೂರ್ಯನಂತೆ ಜ್ಞಾನವು ಆ ಪರ (ವಸ್ತು)ವನ್ನು ಬೆಳಗುವುದು. ಅಜ್ಞಾನವು ಜ್ಞಾನದಿಂದ ಎಂದು ನಾಶವಾಗುತ್ತದೋ, ಅಂದು,ಅವನ ಜ್ಞಾನವು ಸೂರ್ಯನಂತೆ ಪರತತ್ತ್ವವನ್ನು ಪ್ರಕಾಶಿಸುತ್ತದೆ)

ಶ್ಲೋಕ ೨೨ ರಿಂದ ೨೯ ರವರೆಗೆ ಭಗವಾನನು, ಆನಂದ ಪ್ರಾಪ್ತಿಯನ್ನು ಹೊಂದಬೇಕಾದರೆ ಯಾವ ರೀತಿ ಚಿಂತನೆಯನ್ನು ನಡೆಸಬೇಕು ಎಂದು ಹಂತಹಂತವಾಗಿ ತಿಳಿಸಿದ್ದಾನೆ

೨೨. ಇಂದ್ರಿಯಾಣಿ ಪರಾಣ್ಯಾಹುಹು ಇಂದ್ರಿಯೇಭ್ಯಃ ಪರಂ ಮನಃ |
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ || **3.42**

ಜಡವಸ್ತುವಿಗಿಂತ ಇಂದ್ರಿಯಗಳು ಶ್ರೇಷ್ಠ, ಮನಸ್ಸು ಇಂದ್ರಿಯಗಳಿಗಿಂತಲೂ ಶ್ರೇಷ್ಠ. ಬುದ್ಧಿಯು ಮನಸ್ಸಿಗಿಂತ ಇನ್ನೂ ಶ್ರೇಷ್ಠ. ಯಾವನು ಬುದ್ಧಿಗಿಂತಲೂ ಶ್ರೇಷ್ಠನೋ ಅವನೇ ಪರತತ್ತ್ವನು.

ಇಂದ್ರಿಯಗಳು ಎಂದರೆ, ಕಿವಿ ಕಣ್ಣು ಮುಂತಾದ ಜ್ಞಾನೇಂದ್ರಿಯಗಳು, ಸ್ಥೂಲ ದೇಹಕ್ಕಿಂತ ಹೆಚ್ಚಿನವು. ಅದಕ್ಕಿಂತ ಹೆಚ್ಚು ಇರುವುದು ಮನಸ್ಸು. ಅದಕ್ಕಿಂತ ನಿಶ್ಚಯ ಮಾಡುವ ಬುದ್ಧಿಯೂ ಹೆಚ್ಚಿನದು. ಇವೆಲ್ಲವನ್ನೂ ನೋಡುತ್ತಿರುವ ಆತ್ಮನು ಬುದ್ಧಿಗಿಂತ ಹೆಚ್ಚೇನವನು.

೧೩. ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ |
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ || **3.43**

ಮಹಾಬಾಹುವೇ! ಹೀಗೆ ಬುದ್ಧಿಗಿಂತ ಶ್ರೇಷ್ಠವಾದದ್ದು ಆತ್ಮಜ್ಞಾನ ಎಂದು ತಿಳಿದುಕೊಂಡು, ಮನಸ್ಸನ್ನು ಸ್ಥಿರಗೊಳಿಸಿ, ಸಮಾಧಾನದ ಬುದ್ಧಿಯಿಂದ ಕಾಮದ ರೂಪದಲ್ಲಿರುವ ವೈರಿಯನ್ನು ಗೆಲ್ಲಬೇಕು

೧೪. ಯಥೈಧಾಂಸಿ ಸಮಿದ್ಧೋ ಅಗ್ನಿರ್ಭಸ್ಮಸಾತ್ ಕುರುತೇ ಅರ್ಜುನ |
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ || **4.37**

ಅರ್ಜುನ! ಉರಿಯುವ ಬೆಂಕಿಯು, ಕಟ್ಟಿಗೆಯನ್ನು ಹೇಗೆ ಬೂದಿಯಾಗಿ ಮಾಡುತ್ತದೋ,ಹಾಗೆಯೇ ಜ್ಞಾನವೆಂಬ ಅಗ್ನಿಯು, ಎಲ್ಲಾ ಕರ್ಮಗಳ ಪ್ರತಿಕ್ರಿಯೆಗಳನ್ನು ಸುಟ್ಟು ಭಸ್ಮ ಮಾಡುವುದು

೧೫. ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ |
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ || **4.19**

ಯಾರ ಎಲ್ಲಾ ಕರ್ಮಗಳೂ ಇಂದ್ರಿಯಗಳ ತೃಪ್ತಿಯ ಆಸೆಯಿಂದ ಮುಕ್ತ ವಾಗಿರುತ್ತದೋ, ಜ್ಞಾನ ಅಗ್ನಿಯಿಂದ ಸುಟ್ಟ ಕರ್ಮಾಗಳುಳ್ಳ ಆತನನ್ನು ತಿಳಿದವರು, ಪಂಡಿತನೆಂದು ಕರೆಯುವರು.

ಇಂತಹವನು, ಯಾವ ಕರ್ಮದಲ್ಲಿ ಇದ್ದರೂ, ಅದರಲ್ಲಿ ಫಲದ ಬಗ್ಗೆ ಅನಾಸಕ್ತಿಯಿಂದ ಇರುವವನು. ಆದ್ದರಿಂದ ಅವನ ಕರ್ಮವು ಆಕರ್ಮವೇ ಎಂಬುದು ಭಗವಂತನ ಸಂದೇಶ

೧೬. ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಂ |
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಂ || **5.26**

ಆಸೆ, ಕೋಪಗಳಿಂದ ಮುಕ್ತರಾದ, ಪೂರ್ಣವಾಗಿ ಮನಸ್ಸನ್ನು ನಿಗ್ರಹಿಸಿದ ಮತ್ತು ಆತ್ಮಸಾಕ್ಷಾತ್ಕಾರವನ್ನು ಪಡೆದ ಸಾಧು ಪುರುಷರು ಶೀಘ್ರವಾಗಿ ಪರಮೋನ್ನತದಲ್ಲಿ ನಿರ್ವಾಣವನ್ನು ಪಡೆಯುವರು.

೧೭. ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ |
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ || **6.25**

ಕ್ರಮೇಣ ಹಂತಹಂತವಾಗಿ ದೃಢನಿರ್ಧಾರದ ಬುದ್ಧಿಯಿಂದ ಆತ್ಮದಲ್ಲೇ ನಿಲ್ಲಬೇಕು. ಹೀಗೆ ಮನಸ್ಸನ್ನು ಆತ್ಮದಲ್ಲೇ ಸ್ಥಿರವಾಗಿಸಬೇಕು, ಬೇರೆ ಯಾವುದರ ಬಗ್ಗೆಯೂ ಚಿಂತಿಸಬಾರದು

೧೮. ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ |ತತಸ್ತತೋ ನಿಯಮ್ಯೈ ತತ್ ಆತ್ಮನ್ಯೇವ ವಶಂ ನಯೇತ್ | **6.26**

ಚಂಚಲವಾದ ಮತ್ತು ಅಸ್ಥಿರವಾದ ಮನಸ್ಸು ಎಲ್ಲೆಲ್ಲಿ ಅಲೆದಾಡುವುದೋ, ಅದನ್ನು ನಿಯಂತ್ರಿಸಿ ಅಲ್ಲಿಂದ ಆತ್ಮದ ನಿಯಂತ್ರಣಕ್ಕೆ ತರಬೇಕು.

೧೯. ಯತೇಂದ್ರಿಯಮನೋಬುದ್ಧಿಃ ಮುನಿ ರ್ಮೋಕ್ಷ ಪರಾಯಣಃ |
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ | **5.28**

ಮನಸ್ಸನ್ನೂ ಇಂದ್ರಿಯಗಳನ್ನೂ ಬುದ್ಧಿಯನ್ನೂ ನಿಯಂತ್ರಿಸಿ ಮೋಕ್ಷವನ್ನೇ ಗುರಿಯನ್ನಾಗಿಸಿ, ಆಸೆ-ಭಯ ಕ್ರೋಧಗಳನ್ನು ವಿಸರ್ಜಿಸಿ ಯಾರು ಯಾವಾಗಲೂ ಶಾಂತ ಸ್ಥಿತಿಯಲ್ಲಿ ಇರುವನೋ ಅವನು ಖಂಡಿತವಾಗಿಯೂ ಮುಕ್ತನು.

ಮುಂದಿನ ನಾಲ್ಕು ಶ್ಲೋಕಗಳಲ್ಲಿ ಜ್ಞಾನಿಯ ಲಕ್ಷಣಗಳನ್ನು ವಿವರವಾಗಿ ತಿಳಿಸಿದೆ ಕಾಯಾ-ವಾಚಾ-ಮನಸಾ ಅಂದರೆ, ನಡೆ,ನುಡಿ ಮತ್ತು ಮನಸ್ಸಿನ ಸ್ಥಿರತೆಯನ್ನು ಯಾವರೀತಿಯಲ್ಲಿ ಮಾಡಬೇಕು ಎಂಬ ಶರಣಾಗತಿಯ ಮಹತ್ವದ ಬಗ್ಗೆ ವಿವರಣೆ ಇದೆ. ನಿಷ್ಕಾಮ ಕರ್ಮ ಅಂದರೆ ಯಾವ ಕಾರ್ಯವನ್ನು ಮಾಡಿದರೂ, ಫಲದ ಅಪೇಕ್ಷೆಯಿಲ್ಲದ ಮತ್ತು ಆತ್ಮನಲ್ಲಿ ನಿಲ್ಲುವಂತಹ ಸ್ಥಿತಿಯನ್ನು ಪಡೆದುಕೊಳ್ಳಲು ಸೂಚನೆ ನೀಡಿದೆ.

೨೦. ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ |
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ || **6.29**

ಯೋಗವನ್ನು ಹೊಂದಿದವನು (ಯೋಗಿಯು) ಎಲ್ಲಾ ಜೀವಿಗಳಲ್ಲಿಯೂ ನನ್ನನ್ನೇ ಕಾಣುವನು ಮತ್ತು ನನ್ನಲ್ಲಿ ಎಲ್ಲಾ ಜೀವಿಗಳನ್ನೂ ಕಾಣುವನು. ಎಲ್ಲೆಡೆಯೂ ಸಮಾನ ನೋಟವುಳ್ಳವನು (ಪರಬ್ರಹ್ಮನನ್ನೇ ಕಾಣುವನು).

೨೧. ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ || **9.22**

ಬೇರೆ ಯಾವ ಗುರಿಯಿಲ್ಲದೆ, ನನ್ನನ್ನು ಚಿಂತಿಸುತ್ತ ಯಾರು ಆರಾಧಿಸುತ್ತಾರೋ, ಸದಾ ಅವರ ಭಕ್ತಿಯಲ್ಲಿ ನೆಲೆಸಿದ ಅಪೇಕ್ಷೆಗಳ ಮತ್ತದರ ರಕ್ಷಣೆಯನ್ನು ನಾನು ವಹಿಸಿಕೊಳ್ಳುತ್ತೇನೆ.

೩೧. ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ |
ಪ್ರಿಯೋ ಹಿ ಜ್ಞಾನಿನೋ,,ತ್ಯರ್ಥಮಹಂ ಸ ಚ ಮಮ ಪ್ರಿಯಃ **7.17**
ಅವರಲ್ಲಿ ಪೂರ್ಣಜ್ಞಾನವುಳ್ಳ ಭಕ್ತಿಸೇವೆಯಲ್ಲಿ ನಿರತನಾದವನು ವಿಶಿಷ್ಟನಾಗಿರುವನು. ಅವನಿಗೆ ನಾನು ಬಹಳ ಪ್ರಿಯನು ಮತ್ತು ನನಗೆ ಅವನೂ ಬಹಳ ಪ್ರಿಯನು.

೩೩. ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ |
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ || **7.19**

ಬಹು ಜನ್ಮಗಳ ಕೊನೆಯಲ್ಲಿ, ಜ್ಞಾನವುಳ್ಳವನಾಗಿ, "ವಾಸುದೇವನೇ ಸರ್ವಸ್ವ" ಎಂದು ನನ್ನನ್ನು ಹೊಂದುತ್ತಾನೆ. ಅಂಥ ಮಹಾತ್ಮನು ಸಿಕ್ಕುವುದು ಕಷ್ಟ
ಶ್ಲೋಕ ೩೪ ರಿಂದ ೪೦ ರವರೆಗೆ. ಸ್ತಿತಪ್ರಜ್ಞನ (ಸಮತೆ ಮತ್ತು ಅಲುಗಾಡದ ಮನಸ್ಸಿನ ಭಾವವನ್ನು ಹೊಂಡಿದವ) ಲಕ್ಷಣಗಳ ವಿವರಣೆ ಇದೆ..

೩೪. ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ |
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ || **2.55**
"ಪಾರ್ಥ! ಯಾವಾಗ ಮನಸ್ಸಿನ ಕಲ್ಪನೆಗಳಿಂದ ಉಂಟಾದ ಎಲ್ಲಾ ಇಂದ್ರಿಯ ಬಯಕೆಗಳನ್ನು ತ್ಯಜಿಸಿ, ಶುದ್ಧಮನಸ್ಕನಾಗಿ ಆತ್ಮದಲ್ಲೇ ತೃಪ್ತನಾಗುವನೋ, ಆಗ ಅವನನ್ನು ಸ್ಥಿತಪ್ರಜ್ಞ ಎಂದು ಹೇಳಲಾಗುತ್ತದೆ"

೩೫. ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಃಸ್ಪೃಹಃ |
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ |. **2.71**

ಯಾವ ಮನುಷ್ಯನು ಇಂದ್ರಿಯ ತೃಪ್ತಿಯ ಎಲ್ಲಾ ಬಯಕೆಗಳನ್ನು ತ್ಯಜಿಸಿ ಆಶಾಮುಕ್ತನಾಗಿ ಜೀವಿಸುತ್ತಾನೋ, "ನನ್ನದು" ಎಂಬ ಭಾವನೆಯಿಲ್ಲದೆ ಅಹಂಕಾರ ರಹಿತನಾಗುತ್ತಾನೋ ಅವನು ಮಾತ್ರ ಪರಿಪೂರ್ಣ ಶಾಂತಿಯನ್ನು ಪಡೆಯಬಲ್ಲ

೩೯. ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋ ದ್ವಿಜತೇ ಚ ಯಃ |
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ || **12.15**

ಯಾರಿಂದ ಜನರು ಉದ್ವಿಗ್ನ ರಾಗುವುದಿಲ್ಲವೋ, ಯಾರು ಜನರಿಂದ ಉದ್ವಿಗ್ನನಾಗುವುದಿಲ್ಲವೋ, ಯಾರು ಸುಖ-ದುಃಖ, ಭಯ ಉದ್ವೇಗಗಳಿಂದ ಮುಕ್ತನೋ (ಸಮಚಿತ್ತನೋ) ಅವನು ನನಗೆ ಪ್ರಿಯನು

೩೭.ಮಾನಾವಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ |
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ || **14.25**

ಮಾನ-ಅಪಮಾನಗಳಲ್ಲಿ ಸಮಾನನು, ಸ್ನೇಹಿತರ-ಶತ್ರುಗಳ ಪಕ್ಷಗಳಿಗೆ ಸಮಾನನು, ಎಲ್ಲಾ ಫಲಾಪೇಕ್ಷೆಯ ಕರ್ಮಗಳನ್ನು ತ್ಯಜಿಸಿದವನು ಹೀಗಿರುವವನನ್ನು ಗುಣಾತೀತ (ಗುಣಗಳನ್ನು ಮೀರಿದವನು) ಎಂದು ಹೇಳಲಾಗುತ್ತದೆ.

೩೮. ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ |
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ || **3.17**

ಯಾವ ಮನುಷ್ಯನು ಆತ್ಮನಲ್ಲಿಯೇ ಸುಖ ಕಂಡುಕೊಳ್ಳುವನೋ, ಆತ್ಮನಲ್ಲೇ ತೃಪ್ತನೋ,ಆತ್ಮನಲ್ಲಿಯೇ ಸಂತುಷ್ಟನೋ ಅವನಿಗೆ ಖಂಡಿತವಾಗಿಯೂ ಯಾವ ಕರ್ತವ್ಯವೂ, ಇರುವುದಿಲ್ಲ

೩೯. ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ |
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ || **3.18**

ಅಂತಹವನಿಗೆ (ಆತ್ಮಸಾಕ್ಷಾತ್ಕಾರ ಸಾಧಿಸಿದವನಿಗೆ) ನಿಯಮಿತ ಕರ್ತವ್ಯಗಳನ್ನು ಮಾಡುವ ಯಾವ ಉದ್ದೇಶವೂ ಇರುವುದಿಲ್ಲ, ಮಾಡದೆ ಇರಲು ಕಾರಣವೂ ಇರುವುದಿಲ್ಲ. ಇನ್ನೊಂದು ಜೀವಿಯನ್ನು ಅವಲಂಬಿಸುವ ಕಾರಣವೂ ಇರುವುದಿಲ್ಲ

೪೦. ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ |
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ || **4.22**

ತಾನಾಗಿ ಬಂದ ಲಾಭದಲ್ಲಿ ತೃಪ್ತನು, ದ್ವಂದ್ವ ಭಾವವನ್ನು (ಕೀರ್ತಿ-ಅಪಕೀರ್ತಿ, ಮಾನ-ಅಪಮಾನ...) ಮೀರಿದವನು, ಅಸೂಯೆ ಇಲ್ಲದವನು, ಗೆಲವು ಸೋಲುಗಳಲ್ಲಿ ಒಂದೇ ರೀತಿಯಲ್ಲಿರುವವನು ಕರ್ಮವನ್ನು ಮಾಡಿದರೂ ಬಂಧನಕ್ಕೆ ಸಿಲುಕುವುದಿಲ್ಲ

ಸ್ಲೋಕ ೪೧ ರಲ್ಲಿ ಸಂಸಾರಿಕ ಜೀವನದ ನಶ್ವರತೆ ಮತ್ತು ಅದರಲ್ಲಿ ಪ್ರಾಪಂಚಿಕ ಸುಖಗಳ ಭ್ರಮೆಯಲ್ಲಿ, ದೇಹವು ನಾನೇ ಎಂಬ ಅಜ್ಞಾನದ ಮೋಡ ಕವಿದಂತೆ,ಕಂಡೂ ಕಾಣದಂಥ ಸ್ಥಿತಿಯ ಬಗ್ಗೆ ವಿವರಣೆ ಇದೆ. ಇದನ್ನೇ ಮಾಯೆ ಎನ್ನುತ್ತಾರೆ

೪೧. ಈಶ್ವರಃ ಸರ್ವಭೂತಾನಾಂ ಹೃದ್ದೇಶೇ,,ರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ || **18.61**

ಸರ್ವೇಶ್ವರನು, ಎಲ್ಲಾ ಪ್ರಾಣಿಗಳ ಹೃದಯದಲ್ಲಿ ಇದ್ದುಕೊಂಡು, ದೇಹ ಯಂತ್ರದಲ್ಲಿ (ಯಂತ್ರದ ಮೇಲೆ ಏರಿ ಕುಳಿತಂತೆ ಇರುವ) ಎಲ್ಲಾ ಜೀವಿಗಳನ್ನು ತನ್ನ ಮಾಯೆಯಿಂದ ಅವುಗಳನ್ನು ಇಷ್ಟ ಬಂದಂತೆ ತಿರುಗಿಸುತ್ತಾನೆ

ಮಾಯೆಯ, ವಿವರವಾದ ಟಿಪ್ಪಣಿಗೆ, ಅನುಭಾಂದ ೪ ನೋಡಿ

ಶ್ಲೋಕ ೪೨ ರಲ್ಲಿ ,

ಭಗವಂತನ ಇರುವಿಕೆಯ ಅಡಿದಾವರೆಗಳಲ್ಲಿ ನಿಲ್ಲಬೇಕು ಎಂಬ ಖಂಡಿತವಾದ ಸೂತ್ರವನ್ನು ತಿಳಿಸಿ, ಜ್ಞಾನಸಂಪಾದನೆಯೇ ಅತ್ಯುತ್ತಮ ಉನ್ನತ ಗುರಿ, ಆಗಬೇಕು ಎಂಬ ಆಶಯದೊಂದಿಗೆ, ಶ್ರೀ ಭಗವಾನ್ ರಮಣರು ಮುಕ್ತಾಯಗೊಳಿಸುತ್ತಾರೆ.

೪೨. ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ |
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ || **18.62**

ಭರತವಂಶಜನೇ! ಖಂಡಿತವಾಗಿ ಅವನಿಗೆ ಪೂರ್ಣ ಮನಸ್ಸಿನಿಂದ ಶರಣಾಗು. ಅವನ ಅನುಗ್ರಹದಿಂದ ದಿವ್ಯಶಾಂತಿಯನ್ನೂ, ಶಾಶ್ವತವಾದ ಪರಮಧಾಮವನ್ನೂ ಹೊಂದುವೆ

Xx ಶ್ಲೋಕಗಳ ಸೂಕ್ಷ್ಮ ವಿವರಣೆ

ಭಗವದ್ಗೀತೆಗೆ,ಅರ್ಜುನ ನಿಮಿತ್ತ. ಅವನಲ್ಲಿ ಮೂಡಿದ ಗೊಂದಲಗಳು,ನಮ್ಮೆಲ್ಲರಲ್ಲೂ ಸಹಜವಾಗಿ ಇರುವುದಕ್ಕೆ ಕಾರಣ, ಪ್ರಾಪಂಚಿಕ ಸುಖವೇ ಮುಖ್ಯ ಎಂದು ತಿಳಿದ ನಾವು, ಸಂಸಾರ ಚಕ್ರದಲ್ಲಿ ಸಿಕ್ಕಿ ದೆಹಾಭಿಮಾನವನ್ನು ಬೆಳೆಸಿಕೊಂಡು ಇರುವುದು. ಆತ್ಮನ ನಿಜ ಸ್ವರೂಪವನ್ನು ಅರಿಯದೆ, ಭ್ರಮೆಯಲ್ಲಿ ಸಿಕ್ಕಿ, ನಿವಾರಣೆಯ ಉಪಾಯವನ್ನು ಹುಡುಕದೆ ಅಲೆದಾಡುವುದು.

ಇದನ್ನು ಮೂಲವಾಗಿ ಇಟ್ಟು, ಭಗವಾನರು, "ನೀನು ಯಾರು" ಎಂದು ಸರಿಯಾಗಿ ತಿಳಿದುಕೋ ಎಂಬ ಸಂದೇಶವನ್ನು ಅವರ ಸತ್

ದರ್ಶನ,ಉಪದೇಶ ಸಾರ ಮತ್ತು ರಮಣ ಗೀತಾಗಳಲ್ಲಿ, ವಿಷದವಾಗಿ ಬೋಧಿಸಿದ್ದಾರೆ.

ಭಗವಾನ್ ರಮಣರು ವಿಚಾರ ಮಾರ್ಗದ ಅನುಸಂಧಾನಕ್ಕೆ ಬಹಳ ಒತ್ತು ಕೊಡುತ್ತಿದ್ದರು. ಅದು ಅವರ ಉಪದೇಶ ಸಾರದಲ್ಲಿ ಬಹಳ ವಿಸ್ತಾರವಾಗಿ ನಮಗೆ ಕಂಡುಬರುತ್ತದೆ.
ಅದೇರೀತಿ ಈ ಭಗವದ್ಗೀತೆಯ ನಲವತ್ತೆರಡು ಶ್ಲೋಕಗಳ ಮಾಲೆಯಲ್ಲಿ,ಅವರ ವಿಚಾರಧಾರೆ ಜ್ಞಾನ ಮತ್ತು ಭಕ್ತಿ ಮಾರ್ಗಗಳ ಕಡೆ,ಅವರ ಬಹಳ ಸೂಕ್ಷ್ಮ ದೃಷ್ಟಿ ಗೋಚರವಾಗುತ್ತದೆ. ನಿಷ್ಕಾಮ ಕರ್ಮದ ಬಗ್ಗೆಯೂ ಅವರ ಅನಿಸಿಕೆಗಳು ವಿಷಯವಾಗಿ ಇವುಗಳಲ್ಲಿ ಇದೆ. ಜ್ಞಾನಿಯಾದವನು ಒಬ್ಬ ಉತ್ತಮವಾದ ಭಕ್ತ ಮತ್ತು ಕರ್ಮಯೋಗಿ ಆಗಬಲ್ಲವ ಎನ್ನುವುದು ಅವರು ನೀಡಿರುವ ಉಪದೇಶದ ಸಾರ.

ಈ 42 ಮಣಿಗಳ ಹಾರದಲ್ಲಿ ಶ್ರೀ ರಮಣ ಮಹರ್ಷಿಗಳು ಸತ್ ಚಿತ್ ಆನಂದ ಸ್ವರೂಪವನ್ನು ಯಾವ ರೀತಿ ಹೊಂದಬೇಕು ಎಂದು ಹಂತಹಂತವಾಗಿ ತಿಳಿಸಿದ್ದಾರೆ. ನಮ್ಮೆಲ್ಲರೊಳಗೆ ಇರುವಂತಹ ಮತ್ತು ಸದಾ ಬೆಳಗುತ್ತಿರುವ, ಆತ್ಮಜ್ಯೋತಿ ಒಂದೇ ಶಾಶ್ವತ. ಇದು ಸತ್ಯವೇ ಹೌದು. ಹೊರಗಿನ ಪ್ರಪಂಚದಲ್ಲಿ
ಕಂಡುಬರುವಂತಹ ಪ್ರತಿಯೊಂದು ವಿಚಾರವೂ ಬಂದು ಹೋಗುವಂತಹ ನಾಶ ಉಳ್ಳ ಸ್ವಭಾವದಿಂದ ಕೂಡಿದ್ದು.
ಆದ್ದರಿಂದ ನಮ್ಮೊಳಗಿರುವ ಸತ್ಯವನ್ನು ಹುಡುಕುವುದೇ ಮುಖ್ಯ ಗುರಿಯಾಗಬೇಕು. ಈ ದೇಹದ ಅಭಿಮಾನವನ್ನು ದಾಟಿ ಆತ್ಮನನ್ನು ತಿಳಿಯುವುದಕ್ಕೆ ನಾವು, ಕ್ಷೇತ್ರ ಕ್ಷೇತ್ರಜ್ಞರ ವಿಚಾರ ಧಾರೆಯಿಂದ,, ಕೂಲಂಕಶವಾಗಿ ವ್ಯತ್ಯಾಸವನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡಬೇಕು. ಈ ತಿಳುವಳಿಕೆಯ ಜ್ಞಾನ ಮತ್ತು ಅದನ್ನು ತಿಳಿಯುವನ ಸಂಬಂಧ ಮುಖ್ಯ.

ಪರಬ್ರಹ್ಮನೇ ಕ್ಷೇತ್ರಜ್ಞ. ನನ್ನನ್ನು ಆ ರೀತಿ ತಿಳಿದುಕೋ. ಎಲ್ಲರ ಹೃದದಲ್ಲೂ ಇರುವವರು ನಾನೇ ಜ್ಯೋತಿ ಸ್ವರೂಪ. ನಾನೇ ಆದಿ ಮಧ್ಯ ಅಂತ್ಯ ಗಳನ್ನು ನೇಮನ ಮಾಡಿ ನಿಯಮಿಸುವವನು ಕೂಡ.(ಶ್ಲೋಕ ೩-೪)
ಈ ಸರ್ವೋಚ್ಚ ಜ್ಞಾನವೇ ನಿರಂತರ,ಶಾಶ್ವತ ಮತ್ತು ಅನಾದಿ. ಇದನ್ನು ಸ್ಪಷ್ಟವಾಗಿ ತಿಳಿಯಲು ಬಂದಿರುವ ಶ್ಲೋಕಗಳು ಮುಂದಿನವು. ಬೆಂಕಿಯಿಂದ ಸುಡಲಾಗದ, ನೀರು ಗಾಳಿಗಳಿಂದ ಯಾವ ವ್ಯತ್ಯಾಸಕ್ಕೆ ಒಳಗಾಗದ, ನಿರಂತರವಾದ ಸತ್ಯ ಸ್ವರೂಪ ಕ್ಷೇತ್ರಜ್ಞ. ಹನ್ಯತೆ ಹನ್ಯ ಮಾನೆ ಶರೀರೇ- ಎಂದರೆ ದೇಹವು ನಾಶವಾಗುವಂತಹದು. ಆತ್ಮನು ಅವಿನಾಶಿ. ದೇಹ, ಬಿದ್ದು ಹೋಗುವುದೇ ಹೊರತು ಆತ್ಮನಿಗೆ ಅಳಿವು ಎಂಬುವುದೇ ಇಲ್ಲ.
ಹತ್ತನೆಯ ಶ್ಲೋಕದಲ್ಲಿ ತಿಳಿಸಿದ ಹಾಗೆ ಈ ಖಂದತ್ವವಿರುವ ದೇಹದಲ್ಲಿ, ತೋರಿಕೊಳ್ಳುವ ಆತ್ಮನೂ ಮತ್ತು ಸಾರ್ವತ್ರಿಕ ಆತ್ಮನೂ ಇಬ್ಬರೂ ಒಂದೇ. -ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ- ಆತ್ಮನೋ ಸರ್ವವ್ಯಾಪಿ, ಅವಿನಾಶಿ, ಎಲ್ಲೆಡೆ ವ್ಯಾಪಿಸಿರುವ ಮತ್ತು ಸರ್ವತಂತ್ರ ಸ್ವತಂತ್ರ. ಅವನೇ ಆನಂದಸ್ವರೂಪಿಯೂ ಹೌದು. ಆ ಆತ್ಮ ನೀನೇ ಆಗಿರುವೆ.

ನೀನು ಈ ನಶಿಸಿ ಹೋಗುವ ದೇಹವೂ ಅಲ್ಲ, ಪ್ರಾಣ ವ್ಯಾಪಾರದಿಂದ ಬಂಧಿತವಾದ ಮನಸ್ಸೂ ಅಲ್ಲ.(ನಾಲ್ಕರಿಂದ 8ನೇ ಶ್ಲೋಕಗಳ ದೀರ್ಘ ಚಿಂತನೆ,) ಮತ್ತು ನಿನ್ನ ನಿಜಸ್ವರೂಪದ ಸತತ ನೆನಪು ಏನೆಂದರೆ,ನೀನು ಶುದ್ಧ ಬುದ್ಧ ಮುಕ್ತ ಆತ್ಮ ಸ್ವರೂಪವೆಂಬ ಸ್ಮರಣೆ, ಎಲ್ಲ ರೀತಿಯ ತಪ್ಪು ಬಂಧನಗಳಿಂದ ಬಿಡುಗಡೆಗೆ ದಾರಿಯಾಗುತ್ತದೆ (ಶ್ಲೋಕ, ೪-೧೧)
ಯಾರು, ಆತ್ಮನಲ್ಲಿ ನೆಲೆ ನಿಂತಿರುವವರೋ, ಅಂತಹವರಲ್ಲಿ ಯಾವ ರೀತಿಯಾದ ಭ್ರಮೆಯೂ ಇರುವುದಿಲ್ಲ. ಮನಸ್ಸಿನ ಎಲ್ಲಾ ಚಟುವಟಿಕೆಗಳಿಂದ ಕೂಡಿದ ಸುಖ-ದುಃಖ ಆಸೆ-ನಿರಾಸೆ ಗಳನ್ನು ದಾಟಿರುವುವನು ಆಗಿರುತ್ತನೆ. (ಶ್ಲೋಕ೧೨-೧೩)

ಆದ್ದರಿಂದ ಮುಮುಕ್ಷು ಆದವನು, ಶಾಸ್ತ್ರ ಮತ್ತು ಸಜ್ಜನರ ಸಂಗದಿಂದ ಪ್ರೇರೇಪಿತನಾಗಿ, ಸೂಕ್ಷ್ಮ ಸಂವೇದನೆಗಳಿಂದ ದೂರ ಇದ್ದು, ಶಾಸ್ತ್ರಗಳ ನಿಯಮಗಳನ್ನು ಅತ್ಯಗತ್ಯವಾಗಿ ಪಾಲಿಸಬೇಕು. (ಶ್ಲೋಕ ೧೪)

ನಿಧಿಧ್ಯಾಸನ ಬಹಳ ಮುಖ್ಯವಾದ ಅಂಗವಾಗಿ ತೋರಿ, ಒಂದೇ ಸಮದೃಷ್ಟಿಯಿಂದ ಮತ್ತು ಏಕಾಗ್ರತೆಯಿಂದ, ಮನನದಿಂದ ಉಂಟಾದ ಸ್ಥಿರತೆಯಿಂದ ಆತ್ಮನನ್ನು ಪಡೆಯಲು ಸಾಧ್ಯವಾಗುತ್ತದೆ (ಶ್ಲೋಕ ೧೬.)

ಶ್ಲೋಕ ೧೭ ಮತ್ತು ೧೮ ರಲ್ಲಿ ಶ್ರದ್ಧೆಯ ಮಹತ್ವ ಮತ್ತು ಅದರ ಅನಿವಾರ್ಯತೆ  ಮತ್ತು ಆಸಕ್ತಿ ಬಹಳ ಮುಖ್ಯವಾದದ್ದು ಎಂದು ವಿವರಿಸಲಾಗಿದೆ.  -ಶ್ರದ್ಧಾಮಯೋ„ಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ - ಎಂಬ ಮಾತು ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶ.

ಅಂತಹ ಶ್ರದ್ಧೆ ಇದ್ದಲ್ಲಿ *ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಹ ಸಮ್ಯತೆಂಡ್ರಿಯಃ" ಎಂಬ ವಾಕ್ಯವು ಶ್ರದ್ಧೆಯನ್ನು ಒತ್ತಿ ಒತ್ತಿ ಹೇಳುತ್ತದೆ. ಇದು ಸಪ್ತಭೂಮಿಕೆ. ಎಂಬ ಜ್ಞಾನ ಭೂಮಿಕೆಯ ಮೊದಲನೆಯ ಹೆಜ್ಜೆ.
ಶ್ಲೋಕ ೧೯ರಿಂದ ೨೧ ರಲ್ಲಿ ಭಗವಂತನ ಕರುಣಾಮಯವಾದ ಅನುಗ್ರಹದಿಂದ ಮತ್ತು ಅವನ ಆಶ್ವಾಸನೆ ಇಲ್ಲದೆ ಇದ್ದಲ್ಲಿ, ಜ್ಞಾನ ಸಂಪಾದನೆ ಕಷ್ಟಕರ ಎಂದು ತಿಳಿಸಿದೆ.

ಏಕೋ ರಸ ಕರುಣ ಎವ ಎಂಬ ನಾಣ್ಣುಡಿ, ಇಲ್ಲಿ ಸ್ಮರಿಸಬೇಕಾಗಿದೆ. ಏಕೆಂದರೆ ಅವನೇ ಕರುಣಾರಸ ಭರಿತವಾದ ಶಕ್ತಿಯಿಂದ ಕೂಡಿದ ಒಬ್ಬ ಜ್ಯೋತಿ ಸ್ವರೂಪ ಅಲ್ಲವೇ? ರಸಾನಾಂ ರಸತಮಹ  ಮತ್ತು ಸಹ

ವೈ ರಸಹ ಎಂಬ ಉಪನಿಷತ್ತು ವಾಕ್ಯಗಳು ಇದನ್ನು ಪುಷ್ಟೀಕರಿಸುತ್ತವೆ.
ಭಗವಂತನ ಕರುಣೆ ನಮಗೆ ದೊರಕಬೇಕಾದರೆ, ನಾವು ಅಹಂಕಾರದಿಂದ ದೂರಸರಿದು, ಸಮರ್ಪಣಾಭಾವಾದತ್ತ ಸಾಗಬೇಕು. ಆತ್ಮನಲ್ಲಿಯೆ ನಮಿಸುತ್ತಾ ರಮಿಸಿತ್ತಾ, ಶ್ರದ್ಧೆಯಿಂದ ಒಡಗೂಡಿದ ಸತತ ಪ್ರಯತ್ನದಿಂದ,ಅವನನ್ನು ಹೊಂದಬಹುದು.

ಶ್ಲೋಕ ೨೨ ರಿಂದ ಭಗವಾನ್ ರಮಣರು, ನಮಗೆ ವಿಚಾರ ಮಾರ್ಗದ ದಾರಿಯನ್ನು ನಿರೂಪಿಸಿತ್ತಾರೆ. ಬುದ್ಧಿ ಅಂತ್ಯವಲ್ಲ. ಇದಕ್ಕಿಂತ ಮಹತ್ತರವಾದ ಮಹತ್ ತತ್ವ, ಅವ್ಯಾಕೃತಗಳನ್ನು ದಾಟಿದ, ಪುರುಷನನ್ನು ಬಯಸಲು,ಎಲ್ಲಾ ರೀತಿಯ ತೊಡರುಗಳನ್ನು ಜಯಿಸಿ ಮುಂದೆ ಸಾಗಬೇಕು. ಇದನ್ನೇ ಶ್ಲೋಕ 23ರಲ್ಲಿ. "ಸಂಸ್ಥಾಭ್ಯಾತ್ಮನಮಾತ್ಮನಾ" ಎಂದು ತಿಳಿಸಿದೆ. ಸಾಧಕನಾದವನು ಮೊದಮೊದಲು ಯಾವ ರೀತಿ ತನ್ನಲ್ಲಿ ಶಿಸ್ತನ್ನು ಬಳಸಿ ಕೊಳ್ಳಬೇಕು ಎಂಬುದನ್ನು ವಿವರವಾಗಿ ತಿಳಿಸಿದೆ

ಶ್ಲೋಕ ೨೭-೨೮ ರಲ್ಲಿರುವ ರೀತಿಯಲ್ಲಿ, ಚಂಚಲ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಂಡು ಸಮತ್ವದ ಚಿತ್ತವನ್ನು ಬೆಳೆಸಿಕೊಳ್ಳಬೇಕು ಎಂಬುವುದನ್ನು ಮಂಡಿಸಲಾಗಿದೆ.

ಶ್ಲೋಕ ೨೪-೨೫-೨೬ ಗಳಲ್ಲಿ, ಋಷಿಮುನಿಗಳು ಯಾವ ರೀತಿ ಉನ್ನತಸ್ಥಿತಿಯನ್ನು ಪಡೆದಿರುವರು ಎಂಬ ಬಗ್ಗೆ ತಿಳಿಸಿದೆ. ಅಂತಹವರ ಮತ್ತು ಸಿದ್ಧಿ ಹೊಂದಿದವರ ಸಮೀಪದಲ್ಲಿ ಇದ್ದು ಅವರಿಂದ ಮಾರ್ಗದರ್ಶನ ಪಡೆಯಬೇಕು ಎಂದು ಸೂಕ್ಷ್ಮವಾಗಿ ವಿವರಿಸಿದೆ. ಇದಕ್ಕಾಗಿ ಅಂತಹವರಲ್ಲಿ ಭಕ್ತಿಯಿಂದ ಮತ್ತು ನಮ್ರತೆಯಿಂದ ಬಳಿ ಸಾರಿ, ಪುನಃ ಪುನಃ ಪ್ರಶ್ನಿಸಿ, ಅದರಿಂದ ಬಂದ ಉತ್ತರಗಳನ್ನು ಪರಾಮರ್ಶಿಸಿ, ಮಾರ್ಗವನ್ನು ಸರಿಯಾಗಿ ತಿಲಿದುಕೊಳ್ಳಬೇಕು.

*ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ , ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್" 4.18

ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ಯಾರು ನೋಡುತ್ತಾನೆಯೋ, ಅವನು ಮನುಷ್ಯರಲ್ಲಿ ಬುದ್ಧಿವಂತನು. ಅವನೇ ಯೋಗಿಯು,ಮತ್ತು ಎಲ್ಲಾ ಕರ್ಮಗಳನ್ನು ಮಾಡಿದವನು.
ಕರ್ಮದಲ್ಲಿ ಅಕರ್ಮ ಎಂದರೆ, ಎಲ್ಲಾ ಕಾರ್ಯಗಳಲ್ಲಿ ತೊಡಗಿದ್ದರೂ,ಅದರ ಆಗು ಹೋಗುಗಳ ಬಗ್ಗೆ, ಕರ್ಮದ ಫಲದ ಬಗ್ಗೆ ಚಿಂತಿಸದೆ,ಮತ್ತು ಅದಕ್ಕೆ ಅಂಟಿಕೊಳ್ಳದೆ ಇರುವುದು. ಇದು ಜ್ಞಾನಿಯ ಲಕ್ಷಣ. ಕರ್ಮ ಮಾಡದೇ ಸುಮ್ಮನೆ ಇರುವುದೂ ಒಂದು ರೀತಿಯಲ್ಲಿ ಕರ್ಮವೇ ಆಗುತ್ತದೆ. ಅಂತಹ ಸ್ಥಿತಿಯಲ್ಲೂ ಜ್ಞಾನಿಯು, ಆನಂದ ಅನುಭೂತಿಯಲ್ಲಿ. ಅಥವಾ ಕೇವಲ ಆನಂದದ ಸ್ಥಿತಿಯಲ್ಲಿಯೇ, ಇರುವವನು .

ಈ ರೀತಿಯಾದ ನಿಷ್ಕಾಮ ಕರ್ಮದಲ್ಲಿ ತೊಡಗಿ ಎಲ್ಲವನ್ನೂ ಸಮಚಿತ್ತದಿಂದ ನೋಡಿದಾಗ ಒಂದು ಸಮತ್ವದ ಅನುಭವ ಆಗಬಲ್ಲದು. ಆದ್ದರಿಂದಲೇ ಜ್ಞಾನಿಯಾದವನು, ಆದರ್ಶ ಕರ್ಮಯೋಗಿ ಎನ್ನುತ್ತಾರೆ ಅವನಿಗೆ ಭೂತ, ವರ್ತಮಾನ, ಭವಿಷ್ಯತ್ ಕಾಲದ ಯಾವ ರೀತಿಯ ಗೋಜುಗಳು ಅಂಟುವುದಿಲ್ಲ.
ಆದ್ದರಿಂದ ಬೇರೆ ಯಾವ ರೀತಿಯ ಚಿಂತೆಯಲ್ಲೂ ಮನಸ್ಸನ್ನು ಕದಲಿಸದೆ ಒಂದೇ ಗುರಿಯತ್ತ ಸಾಗಲು ಪ್ರಯತ್ನವನ್ನು ಮಾಡಬೇಕು. ಈ ರೀತಿಯಾಗಿ ಆತ್ಮನಿಷ್ಠೆಯನ್ನು ಹೊಂದಿದರೆ, ಮುಕ್ತಿಯ ಪಥ ಸುಗಮವಾಗಿ ಸಾಗಬಲ್ಲದು. ಇದಕ್ಕೆ ಸಮದೃಷ್ಟಿಯಿಂದ ಎಲ್ಲರಲ್ಲಿಯೂ ತನ್ನಲ್ಲಿರುವ ಆತ್ಮನನ್ನು ಕಾಣುತ್ತಾ ಧ್ಯಾನ ಮಗ್ನ ಆದರೆ ಬಹಳ ಒಳ್ಳೆಯದು. ಇದಕ್ಕೆ ಸಂಪೂರ್ಣ ಶರಣಾಗತಿ ಮತ್ತು ಅವನಲ್ಲಿ ಅನನ್ಯ ಭಕ್ತಿಯು ಸಹಕಾರಿಯಾಗುವುದು. ತನ್ನ ಇರುವಿಕೆಯ ಅರಿವಿನಲ್ಲೇ ಸತತವಾಗಿ ಇರಬೇಕು( ಶ್ಲೋಕ ೨೧-೨೨) ಈ ರೀತಿಯಾದ ಅರಿವು

ಮೂಡಿದಾಗ ಅದು ಒಂದು ರೀತಿಯಾದ ಉನ್ನತಮಟ್ಟದ ಸ್ಥಿತಿ ಆಗುತ್ತದೆ

ಶ್ಲೋಕ ೩೪-೪೦ ರಿಂದ ಸ್ಥಿತಪ್ರಜ್ಞನ ಲಕ್ಷಣಗಳನ್ನು ವಿಷದವಾಗಿ ತಿಳಿಸಿದೆ. ಎಲ್ಲಾ ಕಾಮನೆಗಳನ್ನು ತ್ಯಜಿಸಿ, ಆತ್ಮನಲ್ಲಿಯೇ ಸಂತುಷ್ಟನಾಗಿ, ಯಾವ ರೀತಿಯ ಬಂಧನಕ್ಕಾಗಲೀ, ಪಾಪ ಪುಣ್ಯಗಳ, ಪ್ರಜ್ಞೆಗೆ ಒಳಗಾಗದೆ, ಸುಖ ದುಃಖಗಳಲ್ಲಿ, ಮಾನ ಅಪಮಾನಗಳಲ್ಲಿ, ಸಮ ದೃಷ್ಟಿಯಲ್ಲಿ ಉಳ್ಳವನಾಗಿ ಇರಬಲ್ಲವ, ಉನ್ನತ ಸ್ಥಿತಿಯಲ್ಲಿ ನಿಲ್ಲಬಲ್ಲವನಾಗುತ್ತಾನೆ.

ಅಂತಹವರಿಗೆ ಯಾವ ಉದ್ದೇಶವೂ ಇರುವುದಿಲ್ಲ ಯಾವ ಕರ್ತವ್ಯವೂ ಇರುವುದಿಲ್ಲ. ಮಾಡುವುದಕ್ಕಾಗಲೀ, ಮಾಡದೇ ಇರುವುದಕ್ಕೆ ಆಗಲೀ ಅಥವಾ,ಇನ್ನೊಂದನ್ನು ಅವಲಂಬಿಸುವ ಕಾರಣವೂ ಇರುವುದಿಲ್ಲ. ಇವನು ಯಾವ ಕರ್ಮದಲ್ಲಿ ತೊಡಗಿದರೂ, ಅದರಲ್ಲಿ ಬಂಧಿತನಾಗುವುದಿಲ್ಲ. ಅಂತಹವನು, ಪರಮ ಶಾಂತಿ, ನಿರಂತರ, ನೀರತಿಶಯ ಸುಖ ಮತ್ತು ಶಾಶ್ವತವಾದ ಪರಂಧಾಮವಾದ ಆತ್ಮನ ನೆಲೆಯೇ, ಆಗಿಬಿಡುತ್ತಾನೆ.ಬ್

ಶ್ರೀ ರಮಣರ ಅದ್ಭುತವಾದ ವಿಚಾರ ಮಾರ್ಗದ ಈ ಒಂದು ಬೋಧನೆ, ಅವರ ಕೃಪಾಕಟಾಕ್ಷ ದೊರೆಯಬೇಕಾದರೆ, ಅವರು ತೋರಿದ ದಾರಿಯಲ್ಲಿ ನಡೆದಾಗ ಮಾತ್ರ, ಅವರ ಸಂಪೂರ್ಣ ದೃಷ್ಟಿ ಮತ್ತು ಆಶೀರ್ವಾದ ಎಲ್ಲರನ್ನೂ ತಲುಪಬಲ್ಲದು.

ಸರ್ವೇ ಭವಂತು ಸುಖಿನಃ
ಸರ್ವೇ ಸಂತು ನಿರಾಮಯಾಹ
ಸರ್ವೇ ಭದ್ರಾಣಿ ಪಷ್ಯಂತು
ಮಾ ಕಶ್ಚಿತ್ ದುಃಖ ಭಾಗ್ ಭವೇತ್

# ಅನುಬಂಧ ೧ ಸತ್ ಮತ್ತು ಅಸತ್.

## ಇರುವುದು ಮತ್ತು ಇಲ್ಲದ್ದು

## ಶ್ಲೋಕ ೬

ಭಗವಂತನ ಸೂತ್ರ ವಾಕ್ಯದಂತೆ, ನಾ ಸತೇ ವಿದ್ಯತೇ ಭಾವೋ ನಾ ಭಾವೋ ವಿದ್ಯತೇ ಸತಃ

ಇಲ್ಲದ್ದಕ್ಕೆ ಇರುವುದು ಅಥವಾ ಉಂಟಾಗುವಿಕೆ ಇಲ್ಲ. ಇರುವಿಕೆಗೆ ಹೋಗುವಿಕೆ ಎಂಬುದು ಇಲ್ಲವೇ ಇಲ್ಲ.
ಸತ್ ಅಂದರೆ ಇರುವುದು, ನಿಜವಾಗಿ ಇರುವುದು, ಇರುವಿಕೆ ಇರುವಂತೆ ತೋರುವುದಲ್ಲ. ಯಾವುದು ನಿಜವಾಗಿಯೂ ಇದೆಯೊ ಅದು ನಾಶ ವಾಗುವುದಿಲ್ಲ.
ಅಸತ್ ಎಂದರೆ ಇಲ್ಲದ್ದು. ಯಾವ ವಸ್ತು ತೋರಿ ಮಾಯವಾಗುವುದೋ, ಅಂದರೆ, ಈಗ ತೋರಿ, ಆಮೇಲೆ ಇಲ್ಲವಾಗುವುದೋ, ಅದು ನಿಜವಾಗಿ ಇರಲೇ ಇರಲಿಲ್ಲ. ಇದನ್ನು ತಿಳಿದು ನಿಶ್ಚಯ ಮಾಡಬೇಕು.
ಒಂದು ವೇಳೆ ಯಾರಾದರೂ ಹೀಗೆ ಕೇಳಿದರೆ "ಅದು ತೋರುವಾಗಲಾದರೂ ಇದ್ದಿತು ಅಲ್ಲವೇ? ಇಲ್ಲ ಎಂದು ಹೇಗೆ ಹೇಳುತ್ತೀರಿ?". ಎಂದು ಕೇಳಿದರೆ ಅದಕ್ಕೆ ಉತ್ತರ ಹೀಗಿದೆ.
"ಅದು ಇರಲಿಲ್ಲ. ತೋರಿತು ಎಂದರೆ, ತೋರಿದಂತ ಭಯ ಮತ್ತು ಭ್ರಮೆ ಉಂಟಾಯಿತು" ಎನ್ನುವುದೇ ಅದಕ್ಕೆ ಉತ್ತರ.

- ನಸುಕಿನಲ್ಲಿ ರಸ್ತೆಯಲ್ಲಿ ನಡೆಯುವಾಗ, ಹಗ್ಗವೊಂದನ್ನು ಕಂಡು, ಅದು ಹಾವಿನಂತೆ ಇದೆ, ಎಂದು ತೋರಿದರೆ ಅ ತೋರಿದ ಹಾವು ನಿಜವಾಗಿಯೂ ಇರಲೇ ಇಲ್ಲ.

ಆದ್ದರಿಂದ ಅದು ಅಸತ್. ಅದಕ್ಕೆ ಇರುವಿಕೆ ಯಾವಾಗಲೂ ಇಲ್ಲ.
ಈ ರೀತಿಯಾಗಿ, ಬದಲು ಅಗುತ್ತಿರುವ, ತೋರಿ, ಆಮೇಲೆ ಇಲ್ಲವಾಗುತ್ತಿರುವ, ಈ ಭ್ರಮೆಗಳ ನೋಟಕ್ಕೆ ಆಧಾರವಾಗಿ, ಒಂದು

ಸತ್ಯವೂ ಇದೆ. ಅದೇ ಪರಮಾತ್ಮನು. ಅದನ್ನು ಕಣ್ಣಿಟ್ಟು ನೋಡಬೇಕು, ಏಕೆಂದರೆ ಅದೇ ನಿಜವಾದ ಬೆಲೆಯಿಂದ ಕೂಡಿ ಇರುವುದು.

ಇಂತಹ ಒಂದು ನಿಶ್ಚಯ ಮಾಡುವ ಬುದ್ಧಿ, ತತ್ವದರ್ಶಿ ಗಳಿಗೆ ಇರುತ್ತದೆ.

ಆದ್ದರಿಂದ ಯಾವುದು ಭ್ರಮೆಯಿಂದ ತೋರುವುದೋ, (ಹುಸಿ ತೋರಿಕೆ ಅಥವಾ ಹುರುಳಿಲ್ಲದ ತೋರಿಕೆ) ಅದು ತನ್ನಷ್ಟಕ್ಕೆ ತಾನೇ ತೋರಿಸಿಕೊಳ್ಳಬಾರದು.
ಏನಾದರೂ ತೋರಬೇಕಾದರೆ, ಅದಕ್ಕೆ ಒಂದು ವಸ್ತು ಇದ್ದೇ ಇರಬೇಕು. ಆದ್ದರಿಂದ ಹುಸಿಯಾದ ಹಾವು ತೊರಬೇಕಾದರೆ, ಅದಕ್ಕೆ ಹಗ್ಗದ ಆಧಾರವು ಇರಲೇಬೇಕು. ಹೊಸದಾಗಿ ಬೇರೆ ಹಾವನ್ನು ಹಗ್ಗಕ್ಕೆ ಗಂಟು ಹಾಕಬೇಕಾಗಿಲ್ಲ.

ಇದೇ ರೀತಿ ನಮ್ಮ ಮುಂದೆ ಕಾಣುವ ನಾಮ-ರೂಪಗಳ ಜಗತ್ತನ್ನು ಹೊಸದಾಗಿ ಪರಮಾತ್ಮನಿಗೆ ಸಂಬಂಧಿಸಬೇಕಾಗಿಲ್ಲ. ಅದು ಎಂದೆಂದೂ ಪರಮಾತ್ಮನೇ. ಪರಮಾತ್ಮನೇ ಇದರಲ್ಲಿ ಆಧಾರವಾಗಿ ನಿಂತು ತೋರುತ್ತಿರುತ್ತಾನೆ. ಇದೇ ತಾತ್ಪರ್ಯ.

# ಅನುಬಂಧ ೨ ಆಕಾಶ

ಶ್ಲೋಕ ೧೦

ನಮ್ಮೆಲ್ಲರ ದೃಷ್ಟಿ ಬಹಳ ಮಿತವಾಗಿ ಒಂದು ಚೌಕಟ್ಟಿನಲ್ಲಿ ಇದೆ. ಅಂದರೆ ನಮಗೆ ಗೋಚರವಾಗುವುದು, ಬೆಳಕಿನ ಪ್ರತಿಫಲನದ ಅತ್ಯಂತ ಚಿಕ್ಕ ಪರಿಮಾಣದಲ್ಲಿ ಇದೆ. ಆದ್ದರಿಂದ ನಾವು ನೋಡುವ ಆಕಾಶ ನೀಲಿ ಬಣ್ಣದ್ದು ಎಂದಾಗ, ಅದು ನೀಲಿ ಅಲ್ಲವೇ ಅಲ್ಲ. ಮೇಲೆ ಏರುತ್ತಾ ಏರುತ್ತಾ ಅದೂ ಸರಿಯುತ್ತದೆ, ಅಂದರೆ ಅದು, ಕೇವಲ ಒಂದು ವಿಶಾಲವಾದ ಸ್ಥಳ.

ಅದು ಎಷ್ಟು ದೊಡ್ಡದು ಎಂದರೆ ನಮಗೆ ಊಹಿಸಲು ಕೂಡ ಆಗದು. ಈ ಭೂಮಿಯು ತನ್ನ ಕಕ್ಷದ ಮೇಲೆ ತಿರುಗುವುದಲ್ಲದೆ, ಸೂರ್ಯನ ಸುತ್ತಲೂ ತಿರುಗುತ್ತಾ ತನ್ನ ಪರಿಧಿಯಲ್ಲಿ ಇರುತ್ತದೆ. ಈ ಒಂದು ಸೂರ್ಯ ಮಂಡಲವು ಕೂಡ,ಆಕಾಶಗಂಗೆ ಗ್ಯಾಲಕ್ಸಿಯ ಒಂದು ತುತ್ತ ತುದಿಯಲ್ಲಿ ಒಂದು ಚುಕ್ಕೆಯಂತಿದೆ. ಈ ಗ್ಯಾಲಕ್ಸಿಯು ಕೂಡ ತನ್ನ ಕಕ್ಷದ ಮೇಲೆ ತಿರುಗುತ್ತಿದೆ.

ಸೂರ್ಯ ಮಂಡಲದ ಶನಿ ಗ್ರಹದಿಂದ ನಾವು ನೋಡಿದಾಗ, ನನ್ನ ಭೂಮಿ ಒಂದು ಚುಕ್ಕಿಯಂತೆ ತೋರುತ್ತದೆ. (ಚಿತ್ರವನ್ನು ನೋಡಿ)

ಇದೆಲ್ಲವನ್ನೂ ಆವರಿಸಿ ಇರುವುದಕ್ಕೆ ಆಕಾಶ ಎಂದು ಹೆಸರು.

ಅದು ಅಷ್ಟು ವಿಶಾಲವೂ ಸೂಕ್ಷ್ಮವೂ ಹೌದು. ಹಾಗಾದರೆ ಇದನ್ನು ಹೇಗೆ ಗುರುತಿಸುವುದು? ನೀವು ನಿಮ್ಮ ಮನೆಯಲ್ಲಿರುವ ಕಿಟಕಿಯಿಂದ ಹೊರಗೆ ನೋಡಿದಾಗ ನಿಮ್ಮ ಮುಂದೆ ವಾಹನಗಳು ಎಡದಿಂದ ಬಲಕ್ಕೆ ಅಥವಾ ಬಲದಿಂದ ಎಡಕ್ಕೆ ಹಾದು ಹೋದಾಗ ಅದರ ಹಿಂದೆ ಇರುವ ಆಕಾಶ ಸ್ಥಳವು ಯಾವರೀತಿಯ ಮಾರ್ಪಾಡಿಗೆ ಒಳಪಡುವುದಿಲ್ಲ. ಅದು,ಮಾರ್ಪಾಡು ಆಗದ ವಸ್ತು ಯಾವುದಕ್ಕೂ ಅಂಟಿಕೊಂಡು ವೃದ್ಧಿ ಯಾಗುವುದಿಲ್ಲ, ಕಮ್ಮಿ ಯಾಗುವುದಿಲ್ಲ. ಅದೇ ರೀತಿ ಈ ಆಕಾಶವು ಎಲ್ಲೆಲ್ಲೂ ರೂಪಿಸಿಕೊಂಡಿರುತ್ತದೆ ಮತ್ತು ಅದು ಯಾವುದರಿಂದಲೂ

ಸೋಕಲ್ಪಡುವುದಿಲ್ಲ. ಹಾಗೆಯೇ, ಆತ್ಮನು ಎಲ್ಲ ದೇಹಗಳಲ್ಲಿ ನೆಲೆಸಿದ್ದರೂ,ಯಾವ ದೇಹದ ಮಾರ್ಪಾಡುನಿಂದಲೂ, ಸೋಸಿಕೊಳ್ಳದು.

ಇನ್ನೊಂದು ಉದಾಹರಣೆಯನ್ನು ನೋಡೋಣ. ಗಡಿಗೆ ಮಡಿಕೆಗಳಲ್ಲಿ ಕಾಣುವ ಅವಕಾಶವು ( ಆಕಾಶವೇ) ನಮಗೆ ದೊಡ್ಡದಾಗಿಯೂ ಸಣ್ಣದಾಗಿಯೂ ಆಯಾಯ ಗಡಿಗೆಗಳ ಆಕಾರ ಮತ್ತು ಗಾತ್ರಕ್ಕೆ ತಕ್ಕಂತೆಯೂ ಕಾಣಬಹುದು. ಆದರೆ ನಿಜ ಸಂಗತಿ ಏನು? ನಾವು, ಇವುಗಳಲ್ಲಿ, ನೋಡುತ್ತಿರುವ ಅವಕಾಶವು, ಒಂದು ವಿಶಾಲವಾದ ಆಕಾಶ. ಈ ಆಕಾಶದಲ್ಲಿಯೇ ಗಡಿಗೆ ಇರುತ್ತದೆ. ಒಂದು ವೇಳೆ ಗಡಿಗೆ ಒಡೆದರೆ, ಈ ಆಕಾಶವು, ಒಡೆದು ಒಂದು ಕಡೆ ನಿಲ್ಲುವುದಿಲ್ಲ ಅಲ್ಲವೇ! ಅದು,ಸೂಕ್ಷ್ಮವಾಗಿ (ಆಕಾಶವು) ಇದ್ದದ್ದು, ಹಂಚಿಹೋಗುತ್ತದೆ.

ಅದೇ ರೀತಿ, ಆತ್ಮನು,ಎಲ್ಲೆಲ್ಲಿಯೂ ಇರುತ್ತಾನೆ. ಶರೀರಗಳು ಆತ್ಮನಲ್ಲಿ ಇರುತ್ತದೆ. ಆತ್ಮನು ಶರೀರದಲ್ಲಿ ಇಲ್ಲ. ಯಾವ ರೀತಿಯಲ್ಲಿ ಗಡಿಗೆ ಮುಂತಾದ ವಸ್ತುಗಳ ಬಣ್ಣ ಮತ್ತು ಆಕಾರ ಬೇರೆಬೇರೆಯಾಗಿದ್ದರೂ ಅದರಲ್ಲಿನ ಆಕಾಶಕ್ಕೆ ಯಾವ ಬಣ್ಣ ಆಕಾರವು ಇರುವುದಿಲ್ಲ. ಗಡಿಗೆ ಅಲ್ಲಾಡಿದರೆ ಆಕಾಶವು ಅಲ್ಲಾಡುವುದಿಲ್ಲ. ಗಡಿಗೆಯಲ್ಲಿ ಧೂಳು ತುಂಬಿದ್ದರೆ, ಅದು ಆಕಾಶಕ್ಕೆ ಅಂಟುವುದೇ ಇಲ್ಲ.

ಆತ್ಮನು, ಆಕಾಶಕ್ಕಿಂತ ಸೂಕ್ಷ್ಮನು. ಆಕಾಶವನ್ನು ವ್ಯಾಪಿಸಿ, ಅದಕ್ಕಿಂತಲೂ ಸರ್ವಗತನು.

ಯಾವ ಶರೀರದಲ್ಲಿಯೇ ಇದ್ದರೂ, ಅವನಿಗೆ ಶರೀರದ ಗುಣಗಳು ಅಂಟುವುದಿಲ್ಲ. ಇಂತಹ ನಿತ್ಯ ಶುದ್ಧ ಬುದ್ಧ ಮುಕ್ತ ಆಕಾಶದಂತೆ ಇರುವವನೇ,ಆತ್ಮ ಸ್ವರೂಪನು.

ಇದೇ ರೀತಿಯಾಗಿ, ಆತ್ಮನು, ಯಾವುದರಲ್ಲಿ (ಶರೀರದಲ್ಲಿ ಆಗಲೀ, ವಸ್ತುವಿನಲ್ಲಿ ಆಗಲೀ) ಇದ್ದರೂ ಅದಕ್ಕೆ ಲಿಪ್ತನಾಗುಗುವುದಿಲ್ಲ.

ಆಕಾಶದ ಉಪಮಾನವನ್ನು ಆತ್ಮನಿಗೆ ಕೊಟ್ಟು, ಇಲ್ಲಿ ಹೋಲಿಕೆಯನ್ನು ತಂದಿದೆ.

ಕೆಳಗಿನ ಚಿತ್ರದಲ್ಲಿ ಒಂದು ಬಿಳಿಯ ಚುಕ್ಕೆಯನ್ನು ನೋಡಬಲ್ಲಿರಾ**?** ಶನಿ ಗ್ರಹದಿಂದ ನೋಡಿದಾಗ ಕಾಣುವ ಈ ಬಿಳಿಯ ಚುಕ್ಕೆಯೇ ನಾವು ವಾಸವಾಗಿರುವ ಭೂಮಿ**.** ಮ್ಯಾರಿನರ್ ಎಂಬ ಆಕಾಶನೌಕೆ ಶನಿಗ್ರಹದ ವರ್ತುಲಗಳ ಬಳಿ ಹೋಗುತ್ತಿದ್ದಾಗ ತೆಗೆದ ಒಂದು ಅದ್ಭುತ ಚಿತ್ರ**.** ಮನುಷ್ಯರಾದ ನಾವು ಎಷ್ಟು ಕ್ಷುಲ್ಲಕರು ಎಂದು ಇದರಿಂದ ತಿಳಿಯುತ್ತದೆ**.**

**7.8** ಬಿಲಿಯನ್ ಮನುಷ್ಯರು ಈ ಸಣ್ಣ ಚುಕ್ಕೆ ಯಲ್ಲಿ ವಾಸಮಾಡುತ್ತಿದ್ದಾರೆ ಈ ಪ್ರಪಂಚವನ್ನೇ ಗೆಲ್ಲಲು ಹೊರಟ ಮಹಾರಾಜರುಗಳು ಈ ಸಣ್ಣ ಧೂಳಿಗಾಗಿ**,** ಯುದ್ಧ ಮಾಡುತ್ತಿದ್ದಾರೆ ಅಲ್ಲವೇ**?**

ಇದೇ ವಿಪರ್ಯಾಸ**!!!?**

ಇಲ್ಲಿರುವ ಮನುಷ್ಯರ ಅಹಂಕಾರವು**,**ಈ ಭೂಮಂಡಲಕ್ಕಿಂತ ದೊಡ್ಡದಾಗಿ ನಮಗೆ ಕಾಣುವುದೇ ಒಂದು ದುರದೃಷ್ಟಕರ ವಿಷಯ**.** ಬ್ರಹ್ಮಾಂಡದ ಮುಂದೆ**,** ನಾವು ಧೂಳಿಗಿಂತ ಕಡೆ ಅಲ್ಲವೇ**?**

ಯೋಚಿಸಿ ನೋಡಿ

……………….. ……………...

Do you see a tiny white dot in the picture below ? It is Earth as seen from Saturn! One of the iconic photographs taken by Voyager spacecraft from the vicinity of Saturn's rings... which made humans feel so insignificant!

7.6 billion people live on this white dot. All the great kings who wanted to win the universe were fighting for this small particle of dust in universe. Strangely, the residents on this white dot have individual egos bigger than the universe...



# ಅನುಬಂಧ ೩ ವ್ಯಕ್ತ, ಅವ್ಯಕ್ತ, ಅಕ್ಷರ

ಶ್ಲೋಕ.೧೨

ಆತ್ಮತತ್ವ ಎನ್ನುವುದು ವ್ಯಕ್ತ ಮತ್ತು ಅವ್ಯಕ್ತ ಎಂಬ ಎರಡು ಬಿಳಲುಗಳಲ್ಲಿ ಇರುವಂತಹ ಸ್ಥಿತಿ.0
ವ್ಯಕ್ತ ಎಂದರೆ ನಿಮ್ಮ ಕಣ್ಣಿಗೆ ಕಾಣಿಸಿದ ದೃಶ್ಯ ಪ್ರಪಂಚ ಮತ್ತು ಶಬ್ದದಿಂದ ಕೂಡಿದ ಪ್ರಪಂಚ.
ಅವ್ಯಕ್ತ ಎಂದರೆ ಅದೃಶ್ಯವಾಗಿ ಇರುವ ಸತ್ಯ. ಕಣ್ಣಿಗೆ ಕಾಣಿಸದಂತಹ, ಮನಸ್ಸಿಗೆ ಎಟುಕದ, ನಿಜವಾದ ಒಂದು ಇರುವಿಕೆ. ಇದು ಪ್ರಪಂಚಕ್ಕಿಂತ ಹೆಚ್ಚಾಗಿ, ಪ್ರಪಂಚವನ್ನು ದಾಟಿ ನಿಂತ ಸತ್ಯಸಂಗತಿ.
ಈ ಎರಡಕ್ಕೂ ಸಮನಾಗಿ, ಏಕೈಕ ಧಾರಣೆಗೆ ಇರತಕ್ಕಂತಹದ್ದು, ಸನಾತನವಾದ ಪರಬ್ರಹ್ಮ. ಇದನ್ನು ಅಕ್ಷರ ತತ್ವ ಎನ್ನುತ್ತಾರೆ. ನಾಶವಾಗದಂತಹ, ನಾಶವಿಲ್ಲದ, ಎಲ್ಲ ಹುಟ್ಟು-ಸಾವು ಗಳಿಗಿಂತ ಆಚೆ ಇರುವಂತಹ ನೆಲೆ.
ಋಗ್ವೇದದಲ್ಲಿ ಒಂದು ಕಡೆ ಈ ರೀತಿ ಹೇಳಿರುತ್ತಾರೆ.
*ನ ತೇ ವಿಷ್ಣೋ ಜಾಯಮಾನೋ ನಾ ಜಾತೋ ದೇವ ಮಹಿಮ್ನಃ ಪರಮಾಂತಮಾಪ."
ಹಿಂದೆ ಹುಟ್ಟಿದವನಾಗಲೀ, ಮುಂದೆ ಹುಟ್ಟುವವನಾಗಲೀ, ಅಕ್ಷರ ಬ್ರಹ್ಮನ ಮಹಿಮೆಯ ತುತ್ತ ತುದಿಯ ಒಂದು ಮೊನೆಯನ್ನೂ ಕೂಡ ತಿಳಿಯಲಾರ. ತಿಳಿಯಲೂ ಸಾಧ್ಯವಿಲ್ಲ ಏಕೆಂದರೆ ಅದು ಅನಂತ.
ಅವ್ಯಕ್ತ ತತ್ವವನ್ನೇ "ಅಕ್ಷರ" ನಾದ ಭಗವಂತ ಎನ್ನುತ್ತಾರೆ. ಆದರೆ ಅಕ್ಷರ ಶಬ್ದದ ಅರ್ಥ--- ಅವನೇ ಎಲ್ಲ ಇಂದ್ರಿಯಗಳಿಗೂ,ಅನುಭವ ಕೊಡುವವ. ಸಮಸ್ತ ಶಬ್ದಗಳಿಗೂ, ವಾಕ್ಕೇ ಮೊದಲಾದ ಶಬ್ದ ತರಂಗಗಳಿಗೂ ಅನುಭವ ಕೊಡುವವ.
ಇದನ್ನೇ ನಾವು ಅರಿಯಬೇಕಾದ ಅಕ್ಷರ ರೂಪ.

ಆದ್ದರಿಂದ ಈ ವ್ಯಕ್ತ-ಅವ್ಯಕ್ತಗಳೆರಡಕ್ಕೂ ಬೇರೆಯಾಗಿ, ಶಾಶ್ವತವಾಗಿ ನಾಶವಿಲ್ಲದ ಇರುವಿಕೆಯ ಸ್ಥಿತಿಯೇ "ಅಕ್ಷರ ಬ್ರಹ್ಮ"

................

# ಅನುಭಂದ ೪ ಮಾಯಾ

ಶ್ಲೋಕ ೪೧

"ಯಾ ಮಾ  ಸಾ ಮಾಯಾ"

ಯಾವುದು ನಮ್ಮ ಕಣ್ಣಿಗೆ ಗೋಚರಿಸುವುದಿಲ್ಲವೋ, ಅದನ್ನು ಮಾಯ ಎನ್ನುತ್ತಾರೆ. ಹಾಗಾದರೆ ನಮಗೆ ಕಾಣಿಸುವುದೆಲ್ಲವೂ ಸತ್ಯವೋ ಎಂದರೆ, ಅದು  ಎಲ್ಲವೂ ಸತ್ಯವಲ್ಲ ಎಂದು ವೇದಾಂತಿಗಳು ಹೇಳುತ್ತಾರೆ. ಅದನ್ನು ಮಿಥ್ಯ ಎನ್ನುತ್ತಾರೆ.




ಈ ಮೇಲೆ ಕಾಣುವ ಬೃಹತ್ ಗಾತ್ರದ ಚಕ್ರವನ್ನು, ಅದಕ್ಕೆ ಜೋಡಿಸಿರುವ ಕುರ್ಚಿಗಳನ್ನು ನೀವು ನೋಡಿರಬಹುದು. ಇದನ್ನು ಜಯಂಟ್ ವೀಲ್  ಎನ್ನುತ್ತಾರೆ.  ಇದರಲ್ಲಿ ನೀವು ಕುಳಿತು ಅನುಭವಿಸಿರಬಹುದು.  ಈ ಚಕ್ರಕ್ಕೆ ಮಧ್ಯದಲ್ಲಿ ಒಂದು ಆಧಾರವಾಗಿರುವ ಗೂಟವನ್ನು ಯಂತ್ರದ ಸಹಾಯದಿಂದ ತಿರುಗಿಸಿದಾಗ, ನೀವು ಕುಳಿತ ಕೂರ್ಚಿಯು ಮೇಲಕ್ಕೆ ಎದ್ದು ಕೆಳಕ್ಕೆ

ಇಳಿಯುತ್ತದೆ. ಇದಕ್ಕೆ,ಒಂದು ರೀತಿಯಲ್ಲಿ ತಿರುಗಿಸುತ್ತಿರುವ, ಕಡಿಮೆ ಮತ್ತು ಹೆಚ್ಚು ಮಾಡಬಲ್ಲ ಒಬ್ಬ ಚಾಲಕ ಇರುತ್ತಾನೆ. ಅವನು. ನಿಮಗೆ ಕಾಣುವುದಿಲ್ಲ.
ಅವನು ನಿಮ್ಮ ಚಲನವನ್ನು ಹೆಚ್ಚು ಕಡಿಮೆ ಮಾಡಬಹುದು ಏಕೆಂದರೆ ಚಲನಶಕ್ತಿಯನ್ನು ನಿಯಂತ್ರಿಸಬಲ್ಲ.ವನಾಗಿ ಇರುತ್ತಾನೆ. ಕುರ್ಚಿಯ ವೇಗ ಬದಲಾದಾಗ ಕಾಣುವ ದೃಶ್ಯ ಕೂಡ ಏರು ಪೇರಾಗುತ್ತದೆ. ಕಾಣಬೇಕಾದ ದೃಶ್ಯ ಕಾಣದೇ ಹೋಗಿ. ಭ್ರಮೆ ಉಂಟುಮಾಡುತ್ತದೆ ಇದನ್ನೇ. ಮಾಯಾ ಎನ್ನುತ್ತಾರೆ. ನಿಮಗೆ ಕಾಣದೆ,ನಿಮ್ಮ ಒಳಗೆ ಇರುವ. ಆ ಆತ್ಮನೇ ಬೆಳಕಿನ ರೂಪದಲ್ಲಿ ನಿಮ್ಮನ್ನು ದಿಗ್ಭ್ರಮೆ ಗೊಳಿಸುವ ಶಕ್ತಿ.

ಇದೇ ರೀತಿ ನಮ್ಮ ಸಂಸಾರವನ್ನು ಮತ್ತು ಈ ಪ್ರಪಂಚದ ಆಗುಹೋಗುಗಳನ್ನು ಒಂದು ಚಕ್ರಕ್ಕೆ ಹೋಲಿಸಬಹುದು. ಈ ಮಾಯೆಯ ಚಕ್ರದಲ್ಲಿ, ನೀವು ಏರುಪೇರುಗಳನ್ನು ಗಮನಿಸಿದಾಗ, ಎಲ್ಲಾ ರೀತಿಯ ಆಸೆಗಳಲ್ಲಿ, ಸುಖ-ದುಃಖಗಳಲ್ಲಿ,ಎಲ್ಲ ರೀತಿಯ ವೇಷಗಳನ್ನು ಹಾಕುತ್ತಾ, ಬೇರೆಬೇರೆ ಭಾವನೆಗಳಿಂದ ತುಂಬಿ, ಎಲ್ಲವನ್ನೂ ನಾನೇ ಮಾಡುತ್ತಿರುವೆ ಎಂಬ ಭ್ರಮೆಯ ಕಾರಣದಿಂದ ಕೂಡಿದವರಾಗಿ, ಜೀವನದಲ್ಲಿ ಹಗಲು ರಾತ್ರಿಗಳನ್ನು ಕಳೆದು ಬಿಟ್ಟಿದ್ದೇವೆ. ಆದರೆ, ಈ ಸಂಸಾರ ಚಕ್ರವನ್ನು ಏರಿ, ಕುಳಿತ ನಾವೆಲ್ಲರೂ ಈಶ್ವರನ ಅಧೀನದಲ್ಲಿ ಇದ್ದೇವೆ ಎಂಬುದನ್ನು ಮರೆತಿದ್ದೇವೆ. ಈ ಪ್ರಪಂಚದಲ್ಲಿ ತೋರುವ ಆಗು ಹೋಗುಗಳು, ಅವೆಲ್ಲವೂ ಕ್ಷಣಕ್ಷಣಕ್ಕೆ ಬದಲಾಗುತ್ತಿದ್ದರೂ ಅವು ಏನೂ ಆಗದಂತೆ ಇರುವವರು ನಾವು (ಆ ಭ್ರಮೆಯಲ್ಲೇ ಇರುತ್ತೇವೆ).ಇದನ್ನೇ ಭಗವಂತನು, "ನಾನು ಎಲ್ಲ ಜೀವಿಗಳಲ್ಲಿ ಇದ್ದುಕೊಂಡು ಈ ಜಗನ್ನಾಟಕವನ್ನು, ನನ್ನಿಷ್ಟ ಬಂದಂತೆ ತಿರುಗಿಸುತ್ತೇನೆ,"ಎಂದು ಹೇಳಿದ್ದಾನೆ.

ಇದನ್ನು ಗೌಡಪಾದರು ಮಾಂಡೂಕ್ಯ ಕಾರಿಕೆಯಲ್ಲಿ, ಅಲಾತಶಾಂತ ಪ್ರಕರಣ ಎಂಬಲ್ಲಿ ವಿವರಿಸಿದ್ದಾರೆ. ಈ ದ್ವೈತ ದೃಷ್ಟಿಯ ರೂಪವನ್ನು ವಿಷದವಾಗಿ ತಿಳಿಸಿದ್ದಾರೆ.

ಒಂದು ಉರಿಯುತ್ತಿರುವ ಬೆಂಕಿಯ ಕೊಳ್ಳಿಯನ್ನು ಕೈಯ್ಯಲ್ಲಿ ಹಿಡಿದು ತಿರುಗಿಸಿದಾಗ, ಅದು ಸುತ್ತುತ್ತಿರುವ ಒಂದು ಚಕ್ರದಂತೆ ಕಾಣುತ್ತದೆ. ಆದರೆ,ವಾಸ್ತವದಲ್ಲಿ ಕೋಳ್ಳಿಯ ಮೂಲ ಕಾಣದೆ ಇರುವುದು, ಒಂದು ಭ್ರಮೆಯೇ ಹೊರತು, ಮತ್ತೇನೂ ಅಲ್ಲ. ಆ ಬೆಳಕೇ ಎಲ್ಲದಕ್ಕೂ ಆಧಾರ. ಆ ಬೆಳಕನ್ನು ಕಣ್ಣಿಂದ ನೋಡಿದಾಗ,ಅದರ ಅರ್ಥವೂ ನಿಮ್ಮ ಮನಸ್ಸಿಗೆ ಹೊಳೆಯುತ್ತದೆ. ಇದು ಮನಸ್ಸಿನ ಮೇಲೆ ಮೂಡಿ, ಬಂದ ಕೂಡಲೇ, ಬುದ್ಧಿ ಅದನ್ನು ತನಗೆ ತೋಚಿದಂತೆ, ಕಾಣದ್ದನ್ನು ಕಂಡಂತೆ ತಿಳಿಯುತ್ತದೆ. ಈ ಬ್ರಮೆ ಯೇ ಮಾಯ ಎನ್ನುತ್ತಾರೆ.

ಮತ್ತೊಂದು ಉದಾಹಣೆಯಿಂದ ಇದನ್ನು ತಿಳಿಯೋಣ. ನೀವು ಚಿತ್ರಮಂದಿರದಲ್ಲಿ ಪರದೆಯ ಮೇಲೆ ಮೂಡುತ್ತಿರುವ ದೃಶ್ಯವನ್ನು ನೋಡುತ್ತಿರುವಾಗ ಅದರಲ್ಲಿ ವಿವಿಧ ಪಾತ್ರಗಳು, ಬಂದು ಹೋಗುತ್ತಿರುವುದು ನಿಮಗೆ ತಿಳಿಯುತ್ತದೆ. ಅದಲ್ಲದೆ ಆ ಪಾತ್ರಗಳು ಮಾತನಾಡುವ ಶಬ್ದಗಳು ಮತ್ತು ಬೇರೆ ಶಬ್ದಗಳು ಕೂಡ ನಿಮ್ಮ ಕಿವಿಯ ಮೇಲೆ ಬೀಳುತ್ತಿರುತ್ತದೆ. ನಾಯಕ ನಾಯಕರು ನಾಯಕಿಯರ ಪ್ರೇಮ ಸಂಭಾಷಣೆ ಮತ್ತು ಖಳನಾಯಕನ ಜೊತೆ ಜಗಳ, ಹೊಡೆದಾಟ ಎಲ್ಲವೂ ತಿಳಿಯುತ್ತದೆ. ಇದೆಲ್ಲವನ್ನು ನೀವು ನಿಜವೆಂದು ತಿಳಿದು ಅದರಲ್ಲಿ ಭಾಗಿಯಾಗುತ್ತೀರಿ. ಆದರೆ ಸತ್ಯ ಸಂಗತಿಯೇ ಬೇರೆ. ನಿಮ್ಮ ಕಣ್ಣು ಕಿವಿ ಮನಸ್ಸು ಎಲ್ಲವೂ ಸೇರಿ ಒಂದು ರೀತಿಯಲ್ಲಿ ನಿಮ್ಮನ್ನು ಮೋಸಗೊಳಿಸಲು ಆರಂಭಿಸಿ ಎಲ್ಲವನ್ನೂ ನಿಜವೆಂದೇ ಭಾವಿಸುವ ನೆಲೆಯನ್ನು ಉಂಟುಮಾಡುತ್ತದೆ. ಇದನ್ನೇ ಸಿನೆಮಾ ಅಥವಾ ಮಾಯ ಎಂದು ಕರೆಯುತ್ತೇವೆ.. ನಿಜವಾಗಿ ಇಲ್ಲದಿರುವುದನ್ನು ನಾವು ಇದೆಯೆಂದೇ ನಂಬುತ್ತೇವೆ..

ವಾಸ್ತವ ಸಂಗತಿಯೇನೆಂದರೆ ಎಲ್ಲವೂ ಪರದೆಯ ಮೇಲೆ ಆಗುತ್ತಿರುವ ಬೆಳಕಿನ ಚೆಲ್ಲಾಟ ಹೊರತು, ಅಲ್ಲಿ ಯಾವ ನಾಯಕನಾಗಲೀ ನಾಯಕಿಯಾಗಲೀ ಇಲ್ಲವೇ ಇಲ್ಲ. ಚಿತ್ರವು ಮುಗಿದಕೂಡಲೇ, ನೀವು ನೋಡಿದ ಯಾರನ್ನೂ ಅಲ್ಲಿ ಹಿಡಿದು ಮಾತನಾಡಿಸಲು ಆಗುವುದಿಲ್ಲ. ಅಲ್ಲಿ ಇಲ್ಲದಿರುವುದನ್ನು ನಾವು ನೋಡುತ್ತಿದ್ದೇವೆ ಎಂದು ತಿಳಿದಿರುತ್ತದೆ. ಆದರೂ ಅದನ್ನು ನಾವು ನಿಜ ಎಂದು ನಂಬಿಕೊಂಡಿದ್ದೇವೆ.

ನೀವು ನಸುಕಿನಲ್ಲಿ, ರಸ್ತೆಯಲ್ಲಿ ಹೋಗುತ್ತಿದ್ದಾಗ, ಅಲ್ಲಿ ಬಿದ್ದಿದ್ದ ಹಗ್ಗವನ್ನು ಹಾವೆಂದು ತಿಳಿದು, ಅದನ್ನೇ ಮತ್ತೊಬ್ಬ ಬಂದು, ಆಡಿಸಿ, ಅದು ಹಾವಲ್ಲ, ಬರಿಯ ತೋರಿಕೆ ಎಂದಾಗ, ನಿಮಗೆ ನಿಜ ತಿಳಿಯುತ್ತದೆ.
ಹಾವು ಎನ್ನುವುದು ಅಸತ್ಯವೇ ಆದರೆ,ಅದರ ಹಿಂದೆ ಇರುವ ತಿಳುವಳಿಕೆ,ಸತ್ಯ ಅಲ್ಲವೇ?
ನಮ್ಮ ನೋಟ, ಚಲನೆಯಲ್ಲಿ ಇದ್ದಾಗ( ಕಣ್ಣು ಮನಸ್ಸು ಬುದ್ಧಿ ಕಾರ್ಯ ಮಾಡಿದಾಗ) ಈ ಕಾರ್ಯದಲ್ಲಿ ಮಾಯೆಯೂ ಸೇರಿಕೊಂಡಿರುತ್ತದೆ. ಇದಕ್ಕೆ ನಿಮ್ಮಮನಸ್ಸಿಗೆ ದೊರೆತ ಚಲನಾ ಶಕ್ತಿಯೇ ಕಾರಣ. ಇದು, ಭ್ರಮೆಯಲ್ಲಿ ನಿಮ್ಮನ್ನು ಮೋಸಗೊಳಿಸಲು ಆರಂಭಿಸಿ, ಇಲ್ಲದ್ದನ್ನು ಇರುವಂತೆ ಮಾಡುತ್ತದೆ. ಈ ರೀತಿಯಾದ ಇಚ್ಛೆ ಮತ್ತು ಅದಕ್ಕೆ ಕಾರಣ ಮಾಯೆಯೇ.
ನಿಮ್ಮಲ್ಲಿ ಇರುವ ಆತ್ಮನ( ಜೀವ) ನೋಟ ಮಾತ್ರ ಇದ್ದಾಗ ಅಂದರೆ, ಮನಸ್ಸು ಇಲ್ಲವಾದಾಗ, ಅದನ್ನು ಕಾರಣ ಬ್ರಹ್ಮ ಎಂದು ಕರೆಯುತ್ತಾರೆ. ನಿಮ್ಮ ಮನಸ್ಸು ಕಾರ್ಯಗತ ವಾದಾಗ, ಅಂದರೆ ಚಲನೆಗೆ ಶುರುವಾದರೆ,ಆ ಒಂದು ಶಕ್ತಿ ಮಾಯಾ ರೂಪದಲ್ಲಿ ಇದ್ದು, ಜೀವವು, ಕಾರ್ಯ ಬ್ರಹ್ಮ ಆಗಿಬಿಡುತ್ತದೆ. ನಿಮ್ಮನ್ನು ಮೋಸಗೊಳಿಸಲು ಆರಂಭಿಸಿ ಇಲ್ಲದ್ದನ್ನು ಇರುವಂತೆ ಮಾಡುತ್ತದೆ.
ಇದನ್ನು ಕಾರ್ಯ ಕಾರಣ ಸಂಬಂಧ ಎನ್ನುತ್ತಾರೆ. ಚಲನೆ ಇಲ್ಲದ ಅಸ್ಥಿತ್ವ(ಕೇವಲ ಇರುವಿಕೆಯ ಅರಿವು
ಅಥವಾ ಜ್ಞಾನ) ಅಗೋಚರ ಆತ್ಮ ಸ್ವರೂಪ. ಗೋಚರ ( ಕಣ್ಣು, ಕಿವಿ ಮುಂತಾದುವುಗಳಿಗೆ) ಚಾಲನಾ ರೂಪವೇ ಮಾಯೆ.

ಈ ಎಲ್ಲಾ ಕಲ್ಪನೆಗೆ ಹಿಂದೆ,ಒಂದು ಮೂಲಶಕ್ತಿ ಆದ ಬೆಳಕು ಆಧಾರವೇ ಹೊರತು ಮತ್ತೆ ಆಲ್ಲಿ ಏನೂ ಇಲ್ಲ. ಸಿನೆಮಾ ಪರದೆಯ ಮೇಲೆ,

ಕಣ್ಣಿನಿಂದ ದೃಶ್ಯವನ್ನು ನೋಡುತ್ತೀರಿ ಕಿವಿಯಿಂದ ಶಬ್ದವನ್ನು ಕೇಳುತ್ತೀರಿ ಮನಸ್ಸಿನಿಂದ ಅದನ್ನು ವಿಚಾರ ಮಾಡುತ್ತೀರಿ. ಉದ್ದವಾದ ವಾಕ್ಯಗಳು ನಿಮಗೆ ತಿಳಿಯುತ್ತದೆ ವಾಕ್ಯಗಳ ಹಿಂದೆ ಪದಗಳು ಇರುತ್ತವೆ ಅದರ ಹಿಂದೆ ಅಕ್ಷರಗಳು ಇರುತ್ತವೆ ಪದಗಳ ಮಧ್ಯೆಯೂ ಅಂತರವಿರುತ್ತದೆ ಇವೆಲ್ಲವೂ ನಿಮಗೆ ತಿಳಿಯುತ್ತದೆ ಆದರೆ ಅಲ್ಲಿ ಬೆಳಕನ್ನು ಬಿಟ್ಟು ಏನೂ ಇರುವುದಿಲ್ಲ. ಇಲ್ಲಿ ಕರ್ತ ಕ್ರಿಯಾ ಕರ್ಮ ಇವೆಲ್ಲರ ಮಧ್ಯೆ ಬೆಳಕನ್ನು ಬಿಟ್ಟರೆ ಬೇರೆ ಏನೂ ಇರುವುದಿಲ್ಲ. ಅಲ್ಲಿ ಏನೂ ಇಲ್ಲದಿರುವುದನ್ನು ಇರುವಂತೆ ತೋರಿಸುವುದೇ ಮಾಯಾಜಾಲ ಎನ್ನುತ್ತಾರೆ.

ಅಲ್ಲಿ, ಏನೂ ಇಲ್ಲ ಎಂದಾಗ ಅಲ್ಲಿ ಶೂನ್ಯವೇ ಆಗುತ್ತದೆ. ಇದು ಸಾಧ್ಯವಿಲ್ಲ ಅಲ್ಲವೇ? ಆದರೆ, ಆ ಸಿನೆಮಾ ಪರದೆಯ ಮೇಲೆ,ಬೆಳಕಿನ ಚೆಲ್ಲಾಟ ಹೊರತು ಮತ್ತೆ ಏನೂ ಇಲ್ಲ ಎಂದಾಗ ಅದು ಅದ್ವೈತ ವಾಗುತ್ತದೆ(ಎರಡು ರೀತಿ ಇಲ್ಲದೆ ಇರುವ ನೆಲೆ). ಆ ಒಂದು ಬೆಳಕಿನ ಶಕ್ತಿಯೇ ಎಲ್ಲವನ್ನೂ ಬೆಳಗುತ್ತ, ಅವುಗಳಿಗೆ ಆಧಾರವಾಗಿ ಇದೆ. ಅದೇ ಸತ್ಯ. ಅದೊಂದೇ ಸತ್ಯ. ಎಲ್ಲೆಲ್ಲೂ ಅದು ಹರಡಿ ಇರುವುದರಿಂದ ಅದೇ ಸತ್ ಸ್ವರೂಪ

ಸತ್ಯವಾಗಲೀ, ಅಸತ್ಯವಾಗಲೀ ಆ ಬೆಳಕು ಇಲ್ಲದೆ ಇರಲಾರದು. ಆ ಶಕ್ತಿಯೇ ಈ ಪ್ರಪಂಚವನ್ನು ನಮಗೆ ತೋರಿಸುತ್ತದೆ. ಸತ್ಯ ಮತ್ತು ಅಸತ್ಯ ಎಂದು ಬೇರ್ಪಡಿಸುವುದು ತಪ್ಪು ಭಾವನೆ.

ಅದೇ ಎಲ್ಲ ಭ್ರಮೆಯನ್ನು ಕೂಡಾ ಉಂಟುಮಾಡುತ್ತದೆ. ಆದರೆ, ಈ ಭೂಮಿಯು, ಸೂರ್ಯ ಮಂಡಲವನ್ನು ಸುತ್ತುತ್ತಾ ಕ್ಷಣ ಕ್ಷಣಕ್ಕೂ ಬದಲಾವಣೆ ಆಗುತ್ತಿದೆ. ಬದಲಾವಣೆ ಶಾಶ್ವತ ಅಲ್ಲ ವಾದುದು. ಆದ್ದರಿಂದ, ಈ ಪ್ರಪಂಚವೂ, ಶಾಶ್ವತ ಅಲ್ಲ. ಇದು ಒಂದು ಭ್ರಮೆ ಅಷ್ಟೇ

ಯಾವುದೇ ವಸ್ತು ಬದಲಾಗುತ್ತಾ ಇರುವುದೋ, ಅದು ಮಿಥ್ಯ.  ಕಾಲ ದೇಶಗಳನ್ನು ಮೀರಿ ಎಂದೆಂದೂ, ಎಲ್ಲೆಲ್ಲೂ ಇರುವುದೇ ಸತ್ಯ ಇದೇ ಸತ್ಯಕ್ಕೂ, ಮಾಯೆಗೂ ಇರುವ ವ್ಯತ್ಯಾಸ

ಮಮ ಮಾಯಾ ದುರತ್ಯಯಾ ಎಂದರೆ, ನನ್ನ ಈ ಆಟವು, ಯಾರಲಿಂಡಲೂ ಊಹಿಸಲಾಗದ ಮತ್ತು ಹಿಡಿಯಲಾಗದ  ಸ್ಥಿತಿ, ಎಂದರ್ಥ.

ಇದೇ ಅದ್ವೈತದ ಮಾಯಾವಾದ.

# ರಮಣ ಮಹರ್ಷಿಗಳೊಡನೆ ಸಂವಾದ.

ಮೂಲ. ರಮಣಾಶ್ರಮ

ಕನ್ನಡಕ್ಕೆ. ರಾಧಾಕಷ್ಣನ್ ಗರಣಿ.

ಖಾಸಗೀ ಉಪಯೋಗಕ್ಕೆ ಸೀಮಿತ
ಮಾರಾಟಕ್ಕೆ ಅಲ್ಲ



ಯಾವ ದೋಷಗಳೂ ಇಲ್ಲದಂತಹ ಸ್ಥಿತಿಯಲ್ಲಿ ಯಾರು ಇರುವನೋ, ಮತ್ತು ಯಾರಲ್ಲಿ, ವ್ಯಕ್ತ-ಅವ್ಯಕ್ತಗಳು ಕೂಡಿದ್ದರೂ ಸ್ವಯಂ ಜ್ಯೋತಿಯಾಗಿ ಇರುವಂತಹ ಶ್ರೀಹರಿಗೆ, ನನ್ನ ನಮನಗಳು.

ಸತ್ ಚಿತ್ ಆನಂದಗಳ ಸ್ವರೂಪನಾದ, ನಾಮರೂಪಗಳು ಇಲ್ಲದಂತಹ, ಶಾಂತನಾದ, ಯಾವ ಆಶ್ರಯದಲ್ಲಿಯೂ ಇಲ್ಲದ,ಗುರುವಾದ ಶಿವನಲ್ಲಿ, ಪ್ರಣಾಮವನ್ನು ಅರ್ಪಿಸುತ್ತೇನ

ತನ್ನ ನಾಮವನ್ನು ಗೋಪ್ಯವಾಗಿ ಇಟ್ಟ, ಒಬ್ಬ ರಮಣ ಮಹರ್ಷಿಗಳ ನಿಕಟವರ್ತಿ ಒಬ್ಬನು, ಸಾವಿರದ

ಒಂಬೈನೂರ ಹನ್ನೆರಡರಲ್ಲಿ, ಶ್ರೀರಮಣರ, ವಿಚಾರಧಾರೆಯ ಸಂದೇಹಗಳಿಗೆ, ಉತ್ತರವನ್ನು ಬಯಸಿ ಅವುಗಳನ್ನು ಸಂವಾದದ ರೂಪದಲ್ಲಿ ಪ್ರಕಟಿಸಿ,ನಮ್ಮೆಲ್ಲರಿಗೂ ಒಂದು ಅದ್ಭುತವಾದ ಕೊಡುಗೆಯನ್ನು ನೀಡಿದ್ದಾನೆ. ಈ ಪ್ರಶ್ನೆ ರಮಣ ಮಹರ್ಷಿಗಳು "ನೀನು ಯಾರು", "ಮೊದಲು, ನಿನ್ನನ್ನು ತಿಳಿದುಕೋ" ಎಂದು ಚಿಂತನೆ ಮಾಡಬೇಕಾದ ಒಂದು ಸಲಹೆಯನ್ನು ಮುಂದಿಟ್ಟು ಕೊಂಡು, ಅದರ ಜಾಡನ್ನು ಹಿಡಿದು, ನಮ್ಮಂತಹ ಎಲ್ಲರ ಸಂದೇಹಗಳನ್ನು ತಾನೇ ಕೇಳಿ, ಅವರಿಂದ ಸೂಕ್ತ ಉತ್ತರವನ್ನು ಪಡೆದಿದ್ದಾನೆ. ಇದು ಬಹಳ ಮಹತ್ತರವಾದ ವಿಷಯ.
ಅವುಗಳನ್ನು, ಅದೇ ಧಾಟಿಯಲ್ಲಿ ಕನ್ನಡ ಭಾಷೆಗೆ ಅಳವಡಿಸಲು ಪ್ರಯತ್ನಿಸಿದ್ದೇನೆ. ಇದರಲ್ಲಿ ಇರಬಹುದಾದ ತಪ್ಪು-ಒಪ್ಪುಗಳಿಗೆ ನಾನೇ ಹೊಣೆ. ಎಲ್ಲಾ ಮುಮುಕ್ಷುಗಳು, ಇದನ್ನು ತಮ್ಮ ಚಿಂತನೆಯಲ್ಲಿ ಇಟ್ಟುಕೊಂಡು, ಈ ಬರಹವನ್ನು ಅವಗಾಹಿಸಬೇಕಾಗಿ ವಿನಂತಿ.

## ಪ್ರಾರಂಭದ ಶಂಕೆಗಳು.

ಪ್ರಶ್ನೆ. ಆತ್ಮನನ್ನು ಹುಡುಕಬೇಕು ಎಂದಾಗ, ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬಹುದು ಎನ್ನುತ್ತೀರಿ. ಈ ಹುಡುಕುವಿಕೆಯ ಸ್ವರೂಪವೇನು,?

ಮಹರ್ಷಿಗಳು. ನೀನು "ಮನಸ್ಸು" ಎಂದುಕೊಳ್ಳೋಣ.. ಮನಸ್ಸು,,ಯೋಚನೆಗಳ ಒಂದು ಸಮೂಹವಲ್ಲದೆ ಮತ್ತೆ ಏನೂ ಅಲ್ಲ. ಪ್ರತಿಯೊಂದು ಯೋಚನೆಯ ಹಿಂದೆ ಸಾಧಾರಣವಾದ ಒಂದು "ನಾನು"ಎಂಬ ಆಲೋಚನೆ ಇದೆ. ಇದೇ ನಿನ್ನ "ಸ್ವರೂಪ".

ಈ "ನಾನು" ಎನ್ನುವುದನ್ನು ಮೊದಲನೆಯ ಯೋಚನೆ ಅಂದುಕೊಳ್ಳೋಣ. ಆದರೆ ಅದು ಎಲ್ಲಿಂದ ಬಂತು? ಇದು ಏನು ಎಂಬುದನ್ನು ಪ್ರಶ್ನೆ ಹಾಕಿಕೊಂಡಾಗ, ಆ ಪ್ರಶ್ನೆಯೇ ನಿನ್ನಲ್ಲಿ ಬೇರೂರಿದ್ದರೆ, ಬೇರೆ ಯೋಚನೆಗಳೇ ಏಳುವುದಿಲ್ಲ ಅಲ್ಲವೇ?

ಪ್ರಶ್ನೆ. ಈ 'ನಾನು' ಎಂಬ ಯೋಚನೆಯಲ್ಲಿ ಇದ್ದಾಗ, ಬೇರೆ ಯೋಚನೆಗಳು ಬಂದು ಹೋಗುತ್ತಿರುತ್ತದೆ ಅಷ್ಟೇ. ಆದರೆ 'ನಾನು ಯಾರು' ಎಂದು ಮನದಲ್ಲಿ ಹೇಳುತ್ತಾ ಇದ್ದರೆ ಅದಕ್ಕೆ ಉತ್ತರವೇ ಸಿಗುವುದಿಲ್ಲವಲ್ಲ? ಈ ಆತ್ಮನಿಷ್ಟೆ ಅಥವಾ ಈ ರೀತಿಯಾದ ಒಂದು ನೆಲೆಯಲ್ಲಿ ಇರುವುದನ್ನು ಸಾಧನೆ ಎನ್ನುತ್ತೀರಾ?

ಮಹರ್ಷಿ. ಎಲ್ಲರೂ ಇದೇ ತಪ್ಪನ್ನು ಪದೇಪದೇ ಮಾಡುತ್ತಿರುತ್ತಾರೆ. ನೀವು ಈ "ನಾನು" ಎಂಬುದನ್ನು ತೀವ್ರವಾಗಿ ಹುಡುಕತೊಡಗಿದಾಗ, ನಾನು ಎಂಬ ಯೋಚನೆಯಿಂದ ಆರಂಭಿಸಿದ, ಮೊದಲ ಯೋಚನೆ, ಕಾಣದೆ ಹೋಗಿ, ಬೇರೆ ಯಾವುದೋ ತಳದಿಂದ ಒಂದು ಯೋಚನೆ ಎದ್ದುಬಂದು ನಿನ್ನನ್ನು ಆವರಿಸಿಕೊಂಡಾಗ, ಅದು, ನಾನು ಎಂಬ ಯೋಚನೆ ಪ್ರಾರಂಭ ಮಾಡಿದ್ದು ಅಲ್ಲ ಎಂದು ಗೊತ್ತಾಗುತ್ತದೆ.

ಪ್ರಶ್ನೆ. ಹಾಗಾದರೆ ಆ ಯಾವುದೋ ಒಂದು ಯೋಚನೆ ಯಾವುದು?

ಮಹರ್ಷಿ. ಅದೇ ನಿಜವಾದ 'ನಾನು'. ಅದರ ಇರುವಿಕೆಯೇ ನಾನು. ಅದು ಅಹಂಕಾರವಲ್ಲ. ಅದು ಒಂದು ಪರಮಾತ್ಮ ಸ್ವರೂಪ.

ಪ್ರಶ್ನೆ. ಆದರೆ, ಈ ರೀತಿ ಹುಡುಕುವಾಗ, ಬರುವ ಎಲ್ಲ ಯೋಚನೆಗಳನ್ನು, ಬಿಡಬೇಕು ಬಿಡಬೇಕು, ಎನ್ನುತ್ತಿರಲಿಲ್ಲ? ಯೋಚನೆಗಳ ಮಹಾಪೂರವೇ ಇದೆ. ಅಂದರೆ, ಒಂದನ್ನು ತಳ್ಳಿಹಾಕಿದರೆ, ಮತ್ತೊಂದು ಯೋಚನೆ ಏಳುತ್ತದೆ. ಅದಕ್ಕೆ ಕೊನೆಯೇ ಇಲ್ಲವಲ್ಲ?

ಮಹರ್ಷಿ. ಯೋಚನೆಗಳನ್ನೆಲ್ಲ ಬಿಡಬೇಕು ಅಥವಾ ತಳ್ಳಿ ಹಾಕಬೇಕು ಎಂದು ನಾನು ಹೇಳಿಲ್ಲವಲ್ಲ. ನೀನು,"ನಾನು' ಎಂಬ ಯೋಚನೆಯ ಜಾಡನ್ನು ಬಿಡದೆ ಇದ್ದಾಗ, ಮತ್ತು ನಿನ್ನ ಆಸಕ್ತಿ ಎಲ್ಲಾ ಆ ಒಂದೇ ಯೋಚನೆಯಲ್ಲಿಯೇ ಇದ್ದಾಗ, ಬೇರೆ ಯೋಚನೆಗಳು ತಾವಾಗಿಯೇ ಬಿದ್ದುಹೋಗಿ,ಇಲ್ಲದಾಗುತ್ತದೆ.

ಪ್ರಶ್ನೆ. ಹಾಗಾದರೆ ಯೋಚನೆಗಳನ್ನು ತಿರಸ್ಕರಿಸುವುದು ಬೇಕಿಲ್ಲವೇ?

ಮಹರ್ಷಿ. ಇಲ್ಲ. ಕೆಲವರಿಗೆ ಈ ರೀತಿ ತಿರಸ್ಕರಿಸುವುದಕ್ಕೆ ಸ್ವಲ್ಪಕಾಲ ಬೇಕಾಗುವುದು. ಯೋಚನೆಗಳನ್ನು ಒಂದಾದಮೇಲೊಂದು ನಿರ್ಲಕ್ಷ ಮಾಡಬೇಕು ಎಂಬುದು ನಿನ್ನ ಬರಿಯ ಭ್ರಾಂತಿ ಅಷ್ಟೇ. ಅದಕ್ಕೆ ಕೊನೆಯೇ ಇಲ್ಲ. ಆದರೆ ಈ ರೀತಿಯಾದ ಒಂದೊಂದು ಯೋಚನೆಯನ್ನು ಅಲ್ಲಗಳೆಯುತ್ತಾ,

ಸ್ಥಿರವಾಗಿ ಇದ್ದಾಗ, ನಿನ್ನ ಅಂತಃಕರಣಕ್ಕೆ ಹೆಚ್ಚು ಹೆಚ್ಚು ಆಳವಾಗಿ ಇಳಿಯುತ್ತಾ ಇದ್ದೀಯೆ. ನೀನು ಯೋಚನೆಗಳನ್ನು ಬಿಡಬೇಕಾದ ಅಗತ್ಯವೇ ಬರುವುದಿಲ್ಲ.

ಪ್ರಶ್ನೆ.  ಹಾಗಾದರೆ ಪ್ರಯತ್ನ ಮಾಡಬೇಕಾದ ದಣಿವು ಅಥವಾ ಬಿಗಿಯಾದ ನೆಲೆ ಇರುವುದು ಬೇಕಾಗಿಲ್ಲವೇ?

ಮಹರ್ಷಿ.  ಅದೂ ಅಲ್ಲ.  ಒಂದು ಸ್ಥಿತಿಯನ್ನು ಮೀರಿ ನೀನು ಪ್ರಯತ್ನ ಮಾಡಲು ಆಗುವುದೇ ಇಲ್ಲ.

ಪ್ರಶ್ನೆ.  ನಾನು ಅದರಿಂದ ಮುಂದಕ್ಕೆ ಹೋಗಿ ಪ್ರಬುದ್ಧನಾದರೂ, ಪರಿಶ್ರಮವನ್ನು ಮಾಡಬೇಕು ಅಲ್ಲವೇ?

ಮಹರ್ಷಿ.  ಅದು ಸರಿ.  ಪರಿಶ್ರಮವಿಲ್ಲದೆ ಇರಲು ಸಾಧ್ಯವೇ ಇಲ್ಲ. ಯಾವಾಗ ನೀನು, ಅಂತರಾಳದಲ್ಲಿ ಪ್ರಯಾಣ ಮಾಡುತ್ತೀಯೋ, ಆಗ, ನಿನಗೆ ಯಾವ ಪರಿಶ್ರಮವೂ ಮಾಡಲು ಆಗುವುದೇ ಇಲ್ಲ.
ಪ್ರಶ್ನೆ.  ಹಾಗಾದರೆ ನಾನು, ಬಾಹ್ಯದಿಂದ ಯಾವ  ಸಹಾಯವೂ ಇಲ್ಲದೆ, ನನ್ನ ಸ್ವಂತ ಪರಿಶ್ರಮದಿಂದ,  ಈ ಗಹನವಾದ ಸತ್ಯವನ್ನು  ಸ್ವತಹ ಮಾಡಬಲ್ಲವನು ಆಗುತ್ತೇನೆಯೆ?

ಮಹರ್ಷಿ.  ನಿಜ.  ನೀನು ಈ 'ಆತ್ಮನ'  ಬಗೆಗೆ ಮಾಡುತ್ತಿರುವ ಶೋಧನೆಯೇ  ಒಂದು ರೀತಿಯಾದ ದೈವಿಕ ಅನುಭವ ಅಲ್ಲವೇ. ನಿನ್ನ ಹೃದಯದಲ್ಲಿ ಬೆಳಗುತ್ತಿರುವ  ಆ ಉಜ್ವಲವಾದ ಆ ಪ್ರಭೆ, (ನಿನ್ನ ಅಂತರಾತ್ಮ), ನಿನ್ನನ್ನು ಒಳಗಡೆಯಿಂದ ಸೆಳೆಯುತ್ತಿರುತ್ತದೆ. ಅದರ ಸಹಾಯವಿಲ್ಲದೆ, ಅದನ್ನು ಪಡೆಯಲು, ನೀನು ಸತತ ಪ್ರಯತ್ನ ಪಡಬೇಕು. ನಿನ್ನ ಪ್ರಯತ್ನಕ್ಕೆ, "ವಿಚಾರ" ಎನ್ನುತ್ತಾರೆ. ಆದರೆ, ನಿನ್ನ

ಅಂತರಾಳದಲ್ಲಿ ಇದಕ್ಕಾಗಿ ಅನುಗ್ರಹ ಇರಬೇಕು ಎಂದು ನಾನು ಪದೇಪದೇ ಹೇಳುತ್ತಿರುವುದು. ಅ ರೀತಿಯಾದ ಅನುಗ್ರಹವಿಲ್ಲದಿದ್ದರೆ, ನಿಜವಾದ ವಿಚಾರವೇ ಏಳುವುದಿಲ್ಲ. ಈ ರೀತಿಯಾಗಿ ವಿಚಾರ ಮಾಡದೇ ಇರುವವನಿಗೆ ಅನುಗ್ರಹ ಎನ್ನುವುದೇ ಇರುವುದಿಲ್ಲ. ಆದ್ದರಿಂದ 'ವಿಚಾರ' ಮತ್ತು 'ಅನುಗ್ರಹ' ಎರಡೂ ಅವಶ್ಯವಾಗಿ ಇರಬೇಕಾದದ್ದು

## ಸದ್ಗುರು.

ಪ್ರಶ್ನೆ. ಒಬ್ಬ ಸದ್ಗುರುವಿನ ಅನುಗ್ರಹವಿಲ್ಲದೆ 'ಆತ್ಮ' ಎಂಬಲ್ಲಿಗೆ, ತಲುಪಲು ಸಾಧ್ಯವಿಲ್ಲ ಎಂದು ನೀವು ಹೇಳಿದ್ದೀರಿ. ಯಾರು ಈ ಸದ್ಗುರು?

ಮಹರ್ಷಿ. ವಿಚಾರ ಮಾರ್ಗದ ಪಥವನ್ನು ಪರಿಗಣಿಸಿದಾಗ, ಭವ್ಯವಾದ 'ಆತ್ಮನ' ನೆಲೆಯೇ ಸದ್ಗುರುವಾಗುತ್ತದೆ. ಅದು, ನಿನ್ನ ಅಹಂಕಾರದಿಂದ ಏಳುವ 'ನಾನು 'ನಾನು' ಅಲ್ಲ. ನೀನು ಯಾವುದನ್ನು 'ಆತ್ಮ' ಎಂದು ತಿಳಿದಿದ್ದೀಯೊ,. ಅದು ನಿನ್ನ ಅಹಂಕಾರದಿಂದ ಎದ್ದ "ನಾನು" ಅಲ್ಲ.

ಪ್ರಶ್ನೆ. ಅದೇ ನನ್ನ ಭವ್ಯವಾದ ಸ್ಥಿತಿ ಎಂದು ಹೇಳುವುದಾದರೆ, ಅದನ್ನು ಸದ್ಗುರುವಿನ ಅನುಗ್ರಹದಿಂದ ಪಡೆಯುವುದು ಹೇಗೆ?
ಮಹರ್ಷಿ. ಅಹಂಕಾರದ 'ನಾನು' ಎನ್ನುವುದು ಜೀವ. ಅದು ಸರ್ವೇಶ್ವರನಿಂದ ಬೇರೆ. ಯಾವಾಗ, ಜೀವವು, ಶ್ರದ್ಧೆ ಮತ್ತು ಆಸಕ್ತಿ ಇಲ್ಲದ ನೆಲೆಯಲ್ಲಿ ಪರಮೇಶ್ವರನನ್ನು ಸಮೀಪಿಸುತ್ತದೆಯೋ, ಆಗ ನಾಮ ರೂಪಗಳಿಂದ ಕೂಡಿದವರಾಗಿ ಪರಮೇಶ್ವರನೇ 'ಜೀವ' ಆಗಿ ಬಿಡುತ್ತಾನೆ. ಆದ್ದರಿಂದಲೇ ಸ್ವಾಮಿಯೇ ಗುರು ಅಲ್ಲದೆ ಬೇರೆ ಯಾರೂ ಅಲ್ಲ. ಅವನೇ,ಸಾಕಾರ ರೂಪದ ದೈವ-ಅನುಗ್ರಹೀತ. (ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ । (ಗೀತಾ 7-18)
ಉದಾರಾ ಸರ್ವೆ ಎವ ಏತೇ, ಜ್ಞಾನಿ ತು ಆತ್ಮಾ ಇವ ಮೇ ಮತಮ್.

ಭಕ್ತಿ ಮಾರ್ಗದಲ್ಲಿ ನಡೆಯುವವರು ಎಲ್ಲರೂ ದೊಡ್ಡವರೇ. ಆದರೆ ಜ್ಞಾನಿ ಮಾತ್ರ ನನಗೆ ತುಂಬಾ ಹತ್ತಿರದಲ್ಲಿ ಇರುವವ, ಏಕೆಂದರೆ ಜ್ಞಾನವಿಲ್ಲದ ಭಕ್ತಿ ಪೂರ್ಣ ಆಗುವುದಿಲ್ಲ. . ಆರ್ತ, ಜಿಜ್ಞಾಸು, ಅರ್ಥಾರ್ಥಿ, ಮತ್ತು ಜ್ಞಾನಿ ಇವರೆಲ್ಲರೂ ಉತ್ತಮರೇ. ಇವರಲ್ಲಿ, ಜ್ಞಾನಿಯು, "ಆತ್ಮನೇ"ಎಂದು ನಾನು ಭಾವಿಸುವೆನು ಎಂದು ಭಗವದ್ ಗೀತೆ ಹೇಳುತ್ತದೆ. ಆ ಪರಮೇಶ್ವರನೇ ನಿಜವಾದ ಗುರು. ಇದನ್ನು ಯಾರು ಶಂಕಿಸ ಬಲ್ಲರು?

ಪ್ರಶ್ನೆ. ಆದರೆ ಕೆಲವರಿಗೆ ದೇಹ ಧಾರಿಯಾದ ಗುರುಗಳೇ ಇರುವಿದಿಲ್ಲವಲ್ಲಾ?

ಮಹರ್ಷಿ. ನಿಜ. ಕೆಲವು ಪುಣ್ಯಾತ್ಮರಿಗೆ, ಪರಮೇಶ್ವರನು ಜ್ಯೋತಿಯಾಗಿ ಅವರ ಅಂತರಂಗದ ಜ್ಯೋತಿಯಲ್ಲಿ "ಜ್ಯೋತಿಯಾಗಿ" ತೋರಿ ಕೊಳ್ಳುತ್ತಾನೆ..

ಪ್ರಶ್ನೆ. ಹಾಗಾದರೆ ನಿಜವಾದ ಭಕ್ತಿ ಯಾವುದು?

ಮಹರ್ಷಿ. ಏನೆಲ್ಲವನ್ನು ನಾನು ಮಾಡಿದೆ ಎಂದು ಗಣನೆಗೆ ತಂದುಕೊಳ್ಳುತ್ತೇವೆಯೊ, ಅವೆಲ್ಲವೂ ಅವನಿಂದ ಆದದ್ದೇ ಅಲ್ಲವೇ. ಯಾವುದೂ ನನ್ನದು ಅಲ್ಲ. ಈ ರೀತಿಯಾದ ಒಂದು ಭಾವನೆಯಿಂದ ಇರುವುದೇ, ಅತ್ಯಂತ ಗಹನವಾದ ಭಕ್ತಿ. ಏಕೆಂದರೆ ಪರಮಾತ್ಮನು ಸರ್ವಾಂತರ್ಯಾಮಿ. ನಾಮ ರೂಪಗಳಿಂದ ಅವನನ್ನು ಅರ್ಚಿಸುವುದರಿಂದ, ಅವುಗಳನ್ನು ದಾಟುವ ಸ್ಥಿತಿಗೆ ಮನಸ್ಸನ್ನು ಕೊಂಡೊಯ್ಯುತ್ತದೆ. ಭಕ್ತಿಯೇ ಕಡೆಯಲ್ಲಿ ಜ್ಞಾನದಲ್ಲಿ ಅಂತ್ಯಗೊಳ್ಳುತ್ತದೆ. ಪ್ರಾಪಂಚಿಕ ವಸ್ತುಗಳನ್ನು ಹೊಂದಲು ಮಾಡಿದ ಭಕ್ತಿಯಾದರೋ, ಆ

ಆಸೆಗಳು ನೆರವೇರಿದಾಗಲೂ ಅಂತ್ಯ ಗೊಳ್ಳುವುದಿಲ್ಲ. ಪರಮಾತ್ಮನಲ್ಲಿ ದೃಢವಾದ ನಂಬಿಕೆಯು ಬಲವತ್ತರವಾಗಿ, ಕಡೆಯಲ್ಲಿ ಆ ಒಂದು ಭವ್ಯವಾದ ಜ್ಞಾನದಲ್ಲಿ ಸಮಾಪ್ತಗೊಳ್ಳುತ್ತದೆ.

ಪ್ರಶ್ನೆ. ಹಾಗಾದರೆ, ಜ್ಞಾನ ಮಾರ್ಗ ಎಂದರೇನು?
ಮಹರ್ಷಿ. ಅಹಂಕಾರವನ್ನು ತೊರೆದ ಸ್ಥಿತಿಯಿಂದ ಯಾರು ತನ್ನನ್ನು ಗುರುತಿಸಿಕೊಳ್ಳುತ್ತಾನೆಯೋ ಮತ್ತು ತನ್ನನ್ನು ಸ್ಥಾಪಿಸಿಕೊಳ್ಳು ತ್ತಾನೆಯೋ, ಅದೇ ಸ್ವಸ್ವರೂಪ ಸ್ಥಿತಿ.

ಪ್ರಶ್ನೆ. ಭಕ್ತಿ ಮತ್ತು ಜ್ಞಾನಗಳು ಎರಡು ಒಂದೇ ಗುರಿಯನ್ನು ಮುಟ್ಟುತ್ತದೆ ಎಂದು ಹೇಗೆ ಹೇಳುವಿರಿ?

ಮಹರ್ಷಿ. ಯಾಕೆ ಆಗಲಾರದು? ಎರಡು ಮಾರ್ಗಗಳು, ಆ ಶಾಂತತೆಯತ್ತ ಮತ್ತು ಮೌನದತ್ತ ಸಾಗುತ್ತದೆ. ಎಲ್ಲ ರೀತಿಯ ತಿಳುವಳಿಕೆಗಳನ್ನು ದಾಟಿ, ಶಾಂತತೆ ಮತ್ತು ಮೌನದ ಸ್ಥಿತಿಗೆ ಕೊಂಡೊಯ್ಯುವುದಿಲ್ಲ ವೇ?

## ನಿನ್ನಲ್ಲಿರುವ ಆತ್ಮ ನಿನಗೋಸ್ಕರ ಕಾಯುತ್ತದೆ

ಪ್ರಶ್ನೆ. ಪ್ರಪಂಚವು ನಿನ್ನಿಂದ ಬೇರೆಯಲ್ಲ ಎಂದು ನೀವು ಪದೇ ಪದೇ ಹೇಳುತ್ತೀರಲ್ಲ? ಎಲ್ಲವೂ ನಿನ್ನ ಮೇಲೆ ನಿರ್ಧಾರವಾಗಿದೆ ಎಂದು ಹೇಳುತ್ತೀರಲ್ಲ? ನೀನಲ್ಲದೆ ಬೇರೆ ಯಾವುದಿದೆ ಎಂದೂ ಹೇಳುತ್ತೀರಲ್ಲ? ಇದೇ ಬಹಳ ಗೊಂದಲಕ್ಕೆ ಹಾಕುತ್ತದೆ. ಈ ಪ್ರಪಂಚವು ನಾನು ಹುಟ್ಟುವುದಕ್ಕೆ ಮುಂಚೆಯೂ ಇತ್ತು, ಈಗಲೂ ಇದೆ, ನಾನು ಸತ್ತಮೇಲೂ ಇರುತ್ತದೆ. ಅದೇ ರೀತಿ, ಎಷ್ಟೋ ಜನ ಹುಟ್ಟಿ ಸಾಯುತ್ತಿದ್ದರೂ, ಈ ಪ್ರಪಂಚ ಇದೆಯಲ್ಲಾ. ಬೇರೆ

ಎಲ್ಲರೂ ಯಾವ ರೀತಿ ಭೂಮಿಯ ಮೇಲೆ ನಿಂತು ಬಂದು ಹೋದರಲ್ಲಾ, ಅದೇ ರೀತಿ ನಾನು ಕೂಡ ಇದ್ದೇನೆ, ಅಲ್ಲವೇ?

ಮಹರ್ಷಿ. ಈ ಪ್ರಪಂಚ ಇರುವುದಕ್ಕೆ ನೀನೇ ಕಾರಣ ಎಂದು ನಾನು ಯಾವಾಗಲಾದರೂ ಹೇಳಿದ್ದೇನೆಯೆ? ಆದರೆ, 'ನಿನ್ನತನ ಅಥವಾ ನಿನ್ನ ಇರುವಿಕೆ ಎಂಬುದು ಇಲ್ಲದಿದ್ದರೆ ಬೇರೆ ಏನಿದೆ?' ಎಂಬ ಪ್ರಶ್ನೆಯನ್ನು ಹಾಕಿದ್ದೇನೆ. 'ನೀನು' ಎಂಬ ಪದವು ಸೂಕ್ಷ್ಮ ಶರೀರಕ್ಕೆ ಆಗಲೀ ಸ್ಥೂಲ ಶರೀರಕ್ಕಾಗಲೀ ಸಂಬಂಧ ಇಲ್ಲದ್ದು. ಇದಲ್ಲದೆ, ನಿನಗೆ ಒಂದು ಸಲಹೆಯನ್ನು ಕೊಟ್ಟಿದ್ದೇನೆ. ನಿನ್ನಲ್ಲಿರುವ ಆತ್ಮನಲ್ಲಿ ಎಲ್ಲಾ ಕಲ್ಪನೆಗಳು ಬಂದು ಹೋಗುತ್ತಿರುವುದು, ಎಂಬುದು ನಿನಗೆ ಒಂದು ಸಲ ತಿಳಿದಾಗ,. (ನೀನು ಅಥವಾ ನಿನ್ನಂತಹ ಬೇರೆಯವರ ಕಲ್ಪನೆಗಳನ್ನು ಹೊರತುಪಡಿಸಿ) ಈ ಸತ್ಯವು ನಿನಗೆ ಗೋಚರಿಸುತ್ತದೆ. ಪ್ರಪಂಚದಲ್ಲಿ ಕಾಣುವ ಎಲ್ಲ ಕಲ್ಪನೆಗಳಲ್ಲಿ ಬೆಳಗುತ್ತಿರುವ ನಿಜ ಸ್ಥಿತಿಯೇ ಪರಮ ಸತ್ಯ ಮತ್ತು ಈ ನೆಲೆಯೋ,ನೀನು ತಿಳಿದಿರುವಂತಹ "ಜೀವಾತ್ಮ" ನಿಂದ ಬೇರೆಯಾಗಿದೆ. ಜೀವಾತ್ಮ ಎಂಬ ಅಹಂಕಾರದ ವೃತ್ತಿ ಶಾಶ್ವತವಲ್ಲ.
ಆದ್ದರಿಂದ ಈ ದೇಹಕ್ಕೆ ಹೊಂದಿಕೊಂಡ ಜೀವಾತ್ಮನಿಗೂ (ಅಹಂಕಾರ) ಮತ್ತು ಅದರ ಹಿಂದೆ ಬೆಳಗುವ ಪರಮಾತ್ಮನಿಗೆ, ಹೋಲಿಸಬಾರದು.

ಪ್ರಶ್ನೆ. ಹಾಗಾದರೆ ಆತ್ಮನನ್ನು ದೇವರು ಎನ್ನುತ್ತೀರಾ?

ಮಹರ್ಷಿ. ಇದೇ ದೊಡ್ಡ ಗೊಂದಲ. "ನಿನ್ನನ್ನು ತಿಳಿದುಕೊ" ಎಂಬ ವಿಚಾರ ಮಾರ್ಗವು, "ಶಿವ ಅಹಂ" "ಶಿವನು ನಾನೇ*, "ನಾನೇ ಅವನು" ಎಂಬ ಧ್ಯಾನಕ್ಕಿಂತ ಬೇರೆಯಾದದ್ದು. ಈ

ಸ್ವಂತ ತಿಳುವಳಿಕೆಯ ಬಗ್ಗೆ ನಾನು ಹೆಚ್ಚು ಒತ್ತು ಕೊಡುತ್ತೇನೆ. ಏಕೆಂದರೆ, ನಿನ್ನ ಬಗ್ಗೆ, ನೀನು ಯಾರು ಎಂಬ ಬಗ್ಗೆ ಯೋಚನೆ ಮಾಡದೆ, ಪ್ರಪಂಚದ ಆಗುಹೋಗುಗಳು ಮತ್ತು ದೇವರ ಬಗ್ಗೆ ತಿಳಿಯುವುದು ಕಷ್ಟಕರ. " ಸತ್ ಅಹಂ" ಅಥವಾ "ಅಹಂ ಬ್ರಹ್ಮಾಸ್ಮಿ" ನಾನು ಬ್ರಹ್ಮನ್, ಎಂಬ ಧ್ಯಾನದ ಮಾರ್ಗವು, ಬರಿಯ ಮನಸ್ಸಿನ ಕಲ್ಪನೆಗಳೇ ಹೊರತು ಬೇರೆ ಏನೂ ಅಲ್ಲ. ಆದ್ದರಿಂದ ನಾನು ತಿಳಿಸುತ್ತಿರುವ "ನಿನ್ನನ್ನು ತಿಳಿದುಕೋ" ಎಂಬ ಮಾರ್ಗವು ಭಿನ್ನವಾದದ್ದು. ಇದು ನೇರವಾಗಿ ಮೂಲವನ್ನು ತಲುಪಬಲ್ಲದು. ಇದು, ಎಲ್ಲ ರೀತಿಯ ಧ್ಯಾನಗಳಿಗಿಂತ ಉತ್ತಮವಾದದ್ದು. ಏಕೆಂದರೆ ನಾನು ಯಾರು ಎಂಬ ಅನ್ವೇಷಣೆ ತೊಡಗಿ, ಅದರ ಅಂತರಾಳದಲ್ಲಿ ಮುಳುಗಿದಾಗ, ಆ "ನಾನು" ಎಂಬ ವಸ್ತು,ನಿನ್ನನ್ನು ಒಳಕ್ಕೆ ಸೆಳೆಯುತ್ತದೆ. ಆದ್ದರಿಂದ ಇದರಲ್ಲಿ ನಿನ್ನ ಪಾತ್ರ ಏನೇನೂ ಇಲ್ಲ. ಇಂತಹ ಮಾರ್ಗದಲ್ಲಿ ಎಲ್ಲ ರೀತಿಯ ಸಂದೇಹಗಳು ಬಿದ್ದು ಹೋಗುತ್ತದೆ. ಯಾವ ರೀತಿಯಲ್ಲಿ, ನಿದ್ರಿಸುವವನು, ಕಾಲದ ಪರಿಮಿತಿಯನ್ನು ದಾಟಿ ನಿಂತಿರುವನೊ,. ಅದೇ ರೀತಿ ಈ ಮಾರ್ಗವು ನಿನ್ನ ಮೂಲಕ್ಕೆ ನಿನ್ನನ್ನು ತಲುಪಿಸಬಹುದು.

ಪ್ರಶ್ನೆ. ಏನೋ ಒಂದು ವಸ್ತು ನಿಮ್ಮನ್ನು ಸ್ವಾಗತಿಸಲು ಕಾಯುತ್ತಿದೆ, ಎನ್ನುವುದಕ್ಕೆ ಯಾವ ಪುರಾವೆ ಅಥವಾ ಆಧಾರಗಳು ಇದೆ?

ಮಹರ್ಷಿ. ಯಾವಾಗ ಒಬ್ಬನು ಪಕ್ವತೆಯನ್ನು ಹೊಂದುವನೋ, ಆಗ ಅವನಿಗೆ ಅದು ಸ್ಪಷ್ಟವಾಗಿ ತಿಳಿಯುತ್ತದೆ.

ಪ್ರಶ್ನೆ. ಈ ಅಭಿವೃದ್ಧಿ ಹೇಗೆ ಸಾಧ್ಯ?

ಮಹರ್ಷಿ. ನಿನ್ನ ಪ್ರಶ್ನೆಗೆ ಬಹಳಷ್ಟು ಉತ್ತರಗಳನ್ನು ಕೊಡಬಹುದು. ಅವುಗಳು ಹೇಗೇ ಇರಲಿ, ವಿಚಾರ ಮತ್ತು ಶ್ರದ್ಧೆಯಿಂದ ಅನ್ವೇಷಣೆ ಮಾಡಿದಾಗ, ಅದು ಅಭಿವೃದ್ಧಿಗೆ ಸೂಕ್ತವಾದ ದಾರಿ ಆಗುತ್ತದೆ.

ಪ್ರಶ್ನೆ. ನಿಮ್ಮ ವಾದ, ಸುತ್ತಿ ಸುತ್ತಿ ಮತ್ತೆ ಅಲ್ಲಿಗೇ ಬರುವಂತಿದೆ. ನಾನು ಅಭಿವೃದ್ಧಿ ಹೊಂದಿದ್ದೇನೆ ಮತ್ತು ಅನ್ವೇಷಣೆಗೆ ಗಟ್ಟಿಯಾಗಿ ಇದ್ದೇನೆ. ಆದರೆ, ನಿಮ್ಮ ಅನ್ವೇಷಣೆಯ ರೀತಿ, ನನಗೆ ಹೇಗೆ ಅಭಿವೃದ್ಧಿ ತೋರಿಸುತ್ತದೆ?

ಮಹರ್ಷಿ. ಈ ರೀತಿ ಗೊಂದಲಗಳು, ಮನಸ್ಸಿನ ತಳಮಳಗಳು. ತೃಪ್ತಿ ಪಡಿಸುವುದಕ್ಕೆ ಮನಸ್ಸಿಗೆ ಏನಾದರೂ ಒಂದು ಸಿದ್ಧಾಂತವೋ ಅಥವಾ ವಾದವೋ, ಬೇಕು. ಆದರೆ, ಯಾವಾತನು ಈ ರೀತಿಯ ವಿಚಾರಕ್ಕೆ ನಿಶ್ಚಲವಾಗಿ ತೊಡಗುವನೋ, ಅಥವಾ ತನ್ನ ಬಗ್ಗೆ ತಿಳಿಯಲು ಪ್ರಯತ್ನ ಮಾಡುವನೋ, ಅಂತಹವನಿಗೆ, ಯಾವರೀತಿಯ ಸಿದ್ಧಾಂತವೂ ಬೇಡ. ಶಾಸ್ತ್ರಗಳಲ್ಲಿ ಬೇರೆ ಬೇರೆ ರೀತಿಯ ಉಪಾಯಗಳನ್ನು ತಿಳಿಸಿದೆ. ಸಾಧುಗಳ ಮತ್ತು ಗುರುಗಳ ಸಾನಿಧ್ಯವು ಕೂಡ ಮಾರ್ಗವನ್ನು ಸೂಚಿಸುತ್ತದೆ.
ಸಹ ವಾಸೇನ ಮಹತಾಂ ಸತಾಮಾರೂಡ ಚೇತಸಾಂ. (ವಿಚಾರ ಮಾರ್ಗವು ಬುದ್ಧಿಗೆ ಸೀಮಿತವಲ್ಲ. ಅಂತರಾಳ ಬಹಳ ಸೂಕ್ಷ್ಮವಾದುದು.)

ಪ್ರಶ್ನೆ. ಎಲ್ಲ ಯೋಚನೆಗಳನ್ನು ಬಿಡುವುದೇ ವಿಚಾರ ಮಾರ್ಗ ಎಂದು ಕರೆಯಬಹುದೇ?

ಮಹರ್ಷಿ. ಅದು ಮೊದಲ ಹೆಜ್ಜೆ ಆಗಬಲ್ಲದು. ನಿಜವಾದವಿಚಾರಗಳು ಎಂದರೆ, ನೀನು ನಿನ್ನತನಕ್ಕೆ ಅಂಟಿಕೊಂಡಾಗಲೇ, ಎಲ್ಲ ರೀತಿಯ ಮನಸ್ಸಿನ ತರಂಗಗಳು, ಆಗ, ತಾನೇ ಬಿದ್ದು ಹೋಗುತ್ತದೆ.

ಪ್ರಶ್ನೆ. ಹಾಗಾದರೆ ವಿಚಾರ ಎನ್ನುವುದು ಬುದ್ಧಿಶಕ್ತಿಯ ಒಂದು ಅಂಗ ಅಲ್ಲವೇ?

ಮಹರ್ಷಿ. ಇಲ್ಲ. ವಿಚಾರ ಎಂದರೆ ಅಂತರ್ ವಿಚಾರ, ನಿನ್ನ ಒಳಗಿನ ಅನ್ವೇಷಣೆ.

ಪ್ರಶ್ನೆ. ಅದು ಧ್ಯಾನ ಅಲ್ಲವೇ?

ಮಹರ್ಷಿ. ಒಂದು ಪ್ರತಿಪಾದನೆಯ ಹಿಂದೆ ನಿರಂತರವಾಗಿ ಗಮನ ವಿಟ್ಟಾಗ, ಅದು ಅಭ್ಯಾಸ ಅಥವಾ ಸಾಧನೆ ಎನಿಸಿಕೊಳ್ಳುತ್ತದೆ. ಆದರೆ ನಿನ್ನ ಜವಾಬ್ದಾರಿಯನ್ನು ಮತ್ತು ಪರಿಶ್ರಮವನ್ನು ನಿನ್ನಿಂದ ತೆಗೆದುಬಿಟ್ಟಾಗ, ಸಿಗುವಂತಹ ನೆಲೆಗೆ ಆರೂಢ ಸಿದ್ಧಿ ಎನ್ನುತ್ತಾರೆ.

## ಜ್ಞಾನದ ಸ್ಥಿತಿಯು ನಿಷ್ಕ್ರಿಯತೆ ಅಲ್ಲ

ಪ್ರಶ್ನೆ. ಈಗ ನೀವು ವಿವರಿಸಿದಂತೆ, ಧ್ಯಾನಸಿದ್ಧಿ ಪಡೆದವನು, ಪ್ರಪಂಚದಲ್ಲಿ ಓಡಾಡುತ್ತಾ ಕಾರ್ಯಮಾಡುತ್ತಾ, ಮಾತನಾಡುತ್ತಾ ಇರಬಹುದೇ?

ಮಹರ್ಷಿ. ಏಕಾಗಬಾರದು? ಸಿದ್ಧಿ ಹೊಂಡಿದವ ಕಲ್ಲು ಬೊಂಬೆಯಂತೆ ಇರಬೇಕೆ? ಅಥವಾ ಕರಗಿಹೋಗಬೇಕೆ?

ಪ್ರಶ್ನೆ. ನನಗೆ ತಿಳಿಯದು. ಉತ್ತಮವಾದ ಗತಿ ಹೊಂದಬೇಕಾದರೆ, ಎಲ್ಲ ರೀತಿಯ ಯೋಚನೆಗಳಿಂದ, ಅನುಭವಗಳಿಂದ ಮತ್ತು ಇಂದ್ರಿಯಗಳ ಸೆಳೆತಗಳಿಂದ ದೂರ ಇರಬೇಕು ಎನ್ನುತ್ತಾರಲ್ಲ?

ಮಹರ್ಷಿ. ಹಾಗಾದರೆ ನಿದ್ರೆಯಲ್ಲಿ ಇರುವವನಿಗೂ, ಸಿದ್ಧಿ ಸ್ಥಿತಿಯಲ್ಲಿ ಇರುವವನಿಗೂ ಏನು ವ್ಯತ್ಯಾಸ? ಅದು ಬರಿಯ ಒಂದು ನೆಲೆ, ಎಂದು ನೀನು ಭಾವಿಸಿದರೆ, ಅದು ಎಷ್ಟೇ ಮಹತ್ತರವಾದದ್ದು ಆದರೂ, ಅದು ಬಂದು ಹೋಗುವಂತಹ ಸ್ಥಿತಿ ಆಗುತ್ತದೆ. ಅದು ಸಹಜವಾಗುವುದಿಲ್ಲ ಅದು ಪರಮ ಸ್ಥಿತಿ ಹೇಗೆ ಆಗಬಲ್ಲದು? ಇಂತಹ ಸ್ಥಿತಿ ಸಿದ್ದರಿಗೂ, ಬಂದು ಹೋಗ ಬಹುದು. ಇದು, ಕೆಲವು ವೇಳೆ ಆಗಬಹುದು, ಏಕೆಂದರೆ ಅದು ಪ್ರಾರಬ್ಧದ ಒಂದು ಪರಿಣಾಮ ಅಷ್ಟೇ. ಅದೇನೂ ಪರಮ ಗತಿ ಅಲ್ಲ. ಮುಕ್ತರು, ಸಿದ್ಧರು, ಯೋಗಿಗಳು, ಯಾವಾಗಲೂ ಕಾರ್ಯನಿರತರಾಗಿಯೇ ಇರುವವರು. ಈಶ್ವರನು ಕೂಡ ಅದೇ ರೀತಿ. ಮತ್ತೆ, ಈ ಪ್ರಪಂಚದಲ್ಲಿ ವಿಜೃಂಭಿಸುತ್ತಿರುವ ಒಂದು ಶಕ್ತಿ ಕಾರ್ಯಗತವಾಗದೆ ಇದ್ದರೆ ಪ್ರಾಪಂಚಿಕ ಅನುಕೂಲಗಳು ಹೇಗೆ ಆಗಬಲ್ಲದು? ಆ ಶಕ್ತಿ ಚಲನೆ ಇಲ್ಲದೆ ಇರಲು ಸಾಧ್ಯವೇ? ಇಲ್ಲದಿದ್ದರೆ ದೇವರು ಮತ್ತು ಮುಕ್ತರು ಎಂದು ಯಾರು ತಿಳಿದಿರುತ್ತಾರೆಯೋ, ಅವರೆಲ್ಲರೂ ಆ ನೆಲೆಯಲ್ಲಿ ಇಲ್ಲ,ಎಂದಂತೆ ಆಯಿತಲ್ಲವೇ?

ಪ್ರಶ್ನೆ.  ಆದರೆ ನೀವು ಯಾವಾಗಲೂ ಮೌನ ಅಥವಾ ನಿಶ್ಯಬ್ದ ಸ್ಥಿತಿಯ ಬಗ್ಗೆ ಬಹಳ ಒತ್ತು ಕೊಡುತ್ತಿರಲಿಲ್ಲ?

ಮಹರ್ಷಿ.  ಹೌದು ಅದು ನಿಜ.
ಮೌನ ಎಂದಕೂಡಲೇ ಕಾರ್ಯಗಳನ್ನು ನಿಲ್ಲಿಸುವುದಲ್ಲ ಅಥವಾ ಜಡವಾಗಿರುವ ನೆಲೆ ಅಲ್ಲ. ಯೋಚನೆಗಳನ್ನು ಅಲ್ಲಗಳೆದು ಇರಬಲ್ಲ ಸ್ಥಿತಿಯೂ ಅಲ್ಲ.  ನೀನು ಯೋಚಿಸುವುದಕ್ಕಿಂತ, ಅದು ಬಹಳ ಮಹತ್ತರವಾದ ಸ್ಥಿತಿ ಎನ್ನುವುದನ್ನು ಮರೆಯಬೇಡ.

ಪ್ರಶ್ನೆ.  ಹಾಗಾದರೆ ಅದು ಯೋಚನೆಗಳನ್ನು ದಾಟಿದ ಸ್ಥಿತಿಯೇ?

ಮಹರ್ಷಿ.  ಹೌದು.  ಎಲ್ಲಿಯವರೆಗೆ ಮನಸ್ಸನ್ನು ಉಪಯೋಗಿಸುವೆಯೋ, ಅಲ್ಲಿಯವರೆಗೆ ನಿನಗೆ ಅದು ದೊರಕಲಾರದು. ಆತ್ಮದ ನಿಶ್ಯಬ್ದತೆ ಯಾವಾಗಲೂ ಇದ್ದೇ ಇದೆ. ಅದು ಅತ್ಯುನ್ನತ ಶಾಂತ ಸ್ಥಿತಿ.  ಆ ಮಹಾ ಮೌನದಲ್ಲಿ ಏನೆಲ್ಲಾ ಚಲನೆಗಳಿಗೂ, ಒಂದು ನಿರ್ವಿಕಾರ ಹೊಂದದ, ಜಡದಂತೆ ಇರುವ,  ಶಕ್ತಿಯೇ ಕಾರಣ. ಇಂತಹ ಮೌನವನ್ನು, ಮುಕ್ತ ಪುರುಷರು ತಮ್ಮ ತಮ್ಮ ನೆಲೆಯನ್ನಾಗಿ ಇರಿಸಿ ಕೊಂಡಿರುವರು.

## ನಿರ್ವಿಕಲ್ಪ ಮತ್ತು ಸಹಜ ಸಮಾಧಿ ಸ್ಥಿತಿ.

ಪ್ರಶ್ನೆ.  ಹಾಗಾದರೆ ಸಮಾಧಿ ಎಂದರೇನು
ಮಹರ್ಷಿ.  ಯೋಗ ಶಾಸ್ತ್ರದ ಪ್ರಕಾರ ಸಮಾಧಿ ಎಂದರೆ ಒಂದು ರೀತಿಯ ಬಾಹ್ಯ ಸಂಬಂಧಗಳ ಅರಿವು, ತಪ್ಪಿಹೋಗಿರುವಂತಹ ಸ್ಥಿತಿ.  ವಿವಿಧ ರೀತಿಯ ಸಮಾಧಿಗಳು ಇವೆ.  ಆದರೆ ನಾನು ಹೇಳುತ್ತಿರುವ ಸಮಾಧಿಯು, ಭಿನ್ನವಾದದ್ದು.  ಅದು ಸಹಜ ಸಮಾಧಿ. ಮನೆಯಲ್ಲಿ ಎಷ್ಟೇ ಕಾರ್ಯಗಳಲ್ಲಿ ತೊಡಗಿದ್ದರೂ

ಇರುವಂತಹ, ಸಮಾಧಾನ, ನೀರವತೆ, ಮೊದಲಾದ ಅಂಶಗಳನ್ನು ಒಳಗೊಂಡ ಸ್ಥಿತಿ. ನಿನ್ನ ಅಂತರಾಳದಲ್ಲಿರುವ ಆತ್ಮಶಕ್ತಿಯಿಂದ ಇವೆಲ್ಲವೂ ನಡೆಯುತ್ತಿದೆ ಎಂಬ ತಿಳುವಳಿಕೆ ಇರುತ್ತದೆ. ಏನೆಲ್ಲವನ್ನು ಮಾತನಾಡಿದರೂ, ಯೋಚಿಸಿದರೂ, ಅದರಿಂದ ಬಾಧಿತವಾಗದೆ ಇರಬಲ್ಲ ನೆಲೆ. ಯಾವ ರೀತಿಯಾದ ಚಿಂತೆ, ಕಾತುರತೆ, ಮತ್ತು ರಕ್ಷಣೆಗೆ ಒಳಗಾಗದ ನೆಲೆ. ಎಲ್ಲ ಕಾರ್ಯಗಳೂ, ಬೇರೊಂದು ಅಥವಾ ಕೆಲವೊಂದು ಸಂದರ್ಭಗಳಿಂದ ಆಗುವುದರಿಂದ, ನೀನು ತಿಳಿದೇ, ಅದರಲ್ಲಿ ಬೆರೆತು ಇರುವ ನೆಲೆ.

ಪ್ರಶ್ನೆ. ಇದೇ ಸಹಜ ಸಮಾಧಿ ಆದರೆ, ಮತ್ತು ಹೊಂದಬೇಕಾದ ಸ್ಥಿತಿ ಅದೇ ಆದರೆ, ನಿರ್ವಿಕಲ್ಪ ಸಮಾಧಿಯ ಅಗತ್ಯವೇ ಇಲ್ಲವಲ್ಲ?

ಮಹರ್ಷಿ ನಿರ್ವಿಕಲ್ಪ ಸಮಾಧಿ ಅಥವಾ. ರಾಜಯೋಗ... ..ಅದರ ಉಪಯೋಗವೇ ಬೇರೆ. ಆದರೆ, ಜ್ಞಾನದಲ್ಲಿ ಇರುವ ಈ ಸಹಜ ಸ್ಥಿತಿ ಅಥವಾ ಸಹಜ ನಿಶ್ಚಿಂತೆ ಸವಿಕಲ್ಪಸ್ಥಿತಿ ಅಲ್ಲವೇ? ಈ ನೆಲೆಯಲ್ಲಿ, ಮನಸ್ಸಿನಲ್ಲಿ ಯಾವ ರೀತಿಯ ಶಂಕೆಯಾಗಲೀ, ಗೊಂದಲವಾಗಲೀ ಇರುವುದಿಲ್ಲ. ಆದ್ದರಿಂದ ಬೇರೆಬೇರೆ ನೆಲೆಗಳನ್ನು ಹುಡುಕಾಡುವ ಅಗತ್ಯವೇ ಇಲ್ಲ. ಅದರಲ್ಲಿ ಯಾವ ರೀತಿಯ ವಿಕಲ್ಪವೂ ಇಲ್ಲ. ಬರಿಯ ಸತ್ಯವೇ ಅದು. ನೈಜ ಸ್ಥಿತಿಯನ್ನು ಅನುಭವಿಸುವಂತಹ ನೆಲೆ. ಕಾರ್ಯಗತವಾಗಿದ್ದರೂ, ನೈಜತೆ, ಆತ್ಮವಿಶ್ವಾಸ ಮತ್ತು ಉನ್ನತ ಆನಂದ ಇರುತ್ತದೆ.

## ಬ್ರಹ್ಮನ್ ಎಂದರೆ ಮನಸ್ಸನ್ನು ದಾಟಿರುವ ನೆಲೆಯೇ?

ಪ್ರಶ್ನೆ. ನಿಮ್ಮ ಸಲಹೆ, ಆತ್ಮನು ಮನಸ್ಸಿಗಿಂತ ಭಿನ್ನ ಎಂಬ ವಿಚಾರಧಾರೆಗೆ, ವ್ಯತಿರಿಕ್ತವಾಗಿದೆ. ಅಂದರೆ ಮನಸ್ಸಿಗೆ ಬ್ರಹ್ಮನ್ ಎಂಬುದರ ಅರಿವೇ ಇರುವುದಿಲ್ಲ ಏಕೆಂದರೆ ಅದು ಕಾಯಾ-ವಾಚಾ-ಮನಸಾ ಗಳಿಂದ ಬೇರೆಯಾದ ನೆಲೆ ಅಲ್ಲವೇ?
ಮಹರ್ಷಿ. ಆದ್ದರಿಂದಲೇ ಮನಸ್ಸಿಗೆ ಎರಡು ಮುಖಗಳು ಇದೆ ಎನ್ನುತ್ತಾರೆ. ಒಂದು ಉನ್ನತವಾದ ಶುದ್ಧವಾಗಿರುವ ಮನಸ್ಸು ಮತ್ತು ಇನ್ನೊಂದು ಕೆಳಗಿನ ಅಶುದ್ಧ ಮನಸ್ಸು. ಅಶುದ್ಧ ಮನಸ್ಸು ಏನನ್ನೂ ತಿಳಿಯಲಾರದು. ಆದರೆ ಎಲ್ಲವೂ, ಶುದ್ಧ ಮನಸ್ಸಿಗೆ ತಿಳಿಯುತ್ತದೆ. ಶುದ್ಧ ಮನಸ್ಸು ಅಳೆಯಲಾರದ ಸ್ವರೂಪವನ್ನು ತಿಳಿಯುತ್ತದೆ ಎಂದಲ್ಲ. ಆದರೆ ಅಂತಹ ಶುದ್ಧ ಮನಸ್ಸಿನಲ್ಲಿ ಆತ್ಮವು ಗೋಚರಿಸಬಲ್ಲದು. ಬೇರೆಬೇರೆ ಚಿಂತೆ ಯೋಚನೆಗಳಲ್ಲಿ ತೊಡಗಿದ್ದರೂ, ಆತ್ಮನ ಇರುವಿಕೆ ತಿಳಿಯುತ್ತದೆ ಮತ್ತು ಅಂತರಾಳದಲ್ಲಿ ಆತ್ಮಶಕ್ತಿ ಇದೆ ಮತ್ತು ಮೇಲ್ನೋಟದಲ್ಲಿ ಎಲ್ಲಾ ಯೋಚನೆಗಳು ಇವೆ, ಎಂದು ಖಚಿತವಾಗುತ್ತದೆ.

ಪ್ರಶ್ನೆ. ಅಂದರೆ ಇದು ಮನೋನಾಶ ಅಥವಾ ಅಹಂಕಾರ ನಾಶ, ನಾಶ ಅಲ್ಲವೆ?. ಮನಸ್ಸಿನ ನಾಶ ಅಥವಾ ಅಹಂಕಾರದ ಬಗ್ಗೆ ನೀವು ತಿಳಿಸುವ ಈ ವಿಚಾರ ಸಂಪೂರ್ಣ ನಾಶವಾಗದ ಸ್ಥಿತಿಯಲ್ಲವೇ?

ಮಹರ್ಷಿ. ಹೌದು ನಿಜ. ಮನಸ್ಸು, ತನ್ನ ಕಲ್ಮಷಗಳನ್ನು ಕಳೆದುಕೊಂಡು, ಸತ್ಯವು ಅದರಲ್ಲಿ ಪ್ರತಿಬಿಂಬವಾಗುವಷ್ಟು ಶುದ್ಧ ಆಗಿರುತ್ತದೆ. ಇದು ಅಹಂಕಾರವು ತಾಂಡವವಾಡುತ್ತಿರುವಾಗ, ಅಸಾಧ್ಯವಾಗುತ್ತದೆ.

# ದೇಹದಲ್ಲಿ ನನಗೆ ನಿವೃತ್ತಿ ನೆಲೆ

ಪ್ರಶ್ನೆ. ಏನೆಲ್ಲ ಪ್ರಶ್ನೆಗಳನ್ನು ನಿಮ್ಮಲ್ಲಿ ಕೇಳಿದರೂ, ಯಾರಿಗೆ ಈ ಶಂಕೆ ಉದ್ಭವವಾಗುತ್ತದೆ, ಎಂದು ಯೋಚಿಸು ಎನ್ನುತ್ತೀರಿ?. ಯಾರಾದರೂ ಶಂಕೆಗೆ ಒಳಗಾದವನ ಬಗ್ಗೆ ಶಂಕಿಸುತ್ತಾರೆಯೇ ಎನ್ನುತ್ತೀರಿ?. ಮುಂದೆ ಹೋಗಲು, "ನೀನುಯಾರು"ಎಂಬುದನ್ನು ಮೊದಲು ತಿಳಿದುಕೋ ಎನ್ನುತ್ತೀರಿ. ಆದರೆ ಇದು ಪ್ರಶ್ನಿಸುವವನ ಉತ್ತರಕ್ಕೆ ಇದು ದಿಟವಾದ (ಖಚಿತವಾದ) ಬ್ರಹ್ಮಾಸ್ತ್ರದಂತಿದೆ.

ಮಹರ್ಷಿ. ಹೌದು ದಿಟ. ಆದರೆ ನೀನು ಏನು ಹೇಳಬಯಸುತ್ತೀಯಾ?

ಪ್ರಶ್ನೆ. ದಯವಿಟ್ಟು ನನ್ನ ಒಂದು ಸ್ಥಿತಿಯಲ್ಲಿ ನೀವು ನಿಂತು ನನ್ನ ಶಂಕೆಯನ್ನು ದೂರಮಾಡಿ. ನಿಮ್ಮ ಮಟ್ಟಕ್ಕೆ ನಾವುಗಳು, ತಲುಪಲಾರವು. ನೀವು ಬಹಳ ಉನ್ನತ ಸ್ಥಾನದಲ್ಲಿ ಇರುವಿರಿ. ನಾವೆಲ್ಲ ಬಹಳ ಬಹಳ ಕೆಳಗಡೆ ಇದ್ದೇವೆ. ನೀವು ನಮ್ಮಲ್ಲಿಗೆ ಬರಬಹುದೇ ವಿನಹ ನಾವು ನಿಮ್ಮ ಮಟ್ಟ ತಲುಪಲಾರೆವು.

ಮಹರ್ಷಿ. ನಿನಗೆ ಏನು ಬೇಕು?

ಪ್ರಶ್ನೆ. ಆತ್ಮನು ಎಲ್ಲೆಲ್ಲೂ ಇರುವನು ಎಂದು ನೀವು ಹೇಳುತ್ತೀರಿ. ಬ್ರಹ್ಮ ಸರ್ವಾಂತರ್ಯಾಮಿ ಎನ್ನುತ್ತೀರಿ. ಆತ್ಮನು ದೇಹದಲ್ಲಿಯೂ ಹೌದು, ಅದಕ್ಕಿಂತ ಆಚೆಯೂ ಹೌದು ಎನ್ನುತ್ತೀರಿ. ನಾನು "ಬ್ರಹ್ಮನ್" ಆಗಿದ್ದರೆ, ಎಲ್ಲೆlಲ್ಲೂ ನಾನು ಇರಬೇಕಲ್ಲವೇ? ಆದರೆ ನಾನು ಈ ದೇಹದಲ್ಲಿ ಅಲ್ಲವೇ ಇರುವುದು? ನಾನು ದೇಹಕ್ಕಿಂತ ವಿಶಿಷ್ಟವಾಗಿದ್ದರೂ ದೇಹದಿಂದ ಬೇರ್ಪಡಿಸಲಾಗದ ವಸ್ತು ಅಲ್ಲವೇ? ಅದೂ ಅಲ್ಲದೆ, ನನ್ನ ಮನಸ್ಸಿನಿಂದಲೂ ನನ್ನನ್ನು ತೆಗೆಯಲು ಆಗದು. ನಾನು ಮನಸ್ಸಿನ ಒಂದು ಅಂಗ

ಎನಿಸುತ್ತದೆ. ಮೆದುಳಿಲ್ಲದೆ ಮನಸ್ಸು ಎಲ್ಲಿದೆ? ಮನಸ್ಸಿಲ್ಲದೆ ನಾನು ಎಂಬುವವನು ಇರಲು ಸಾಧ್ಯವಿಲ್ಲ. ಏಕೆಂದರೆ ಮೆದುಳು ದೇಹದ ಒಂದು ಭಾಗ ಅಲ್ಲವೇ?

ಮಹರ್ಷಿ. ನಿಮ್ಮ ಎಲ್ಲಾ ಪ್ರಶ್ನೆಗಳು ಮುಗಿಯಿತೋ ಅಥವಾ ಇನ್ನೂ ಉಳಿದಿದೆಯೊ? ಶಂಕೆಗಳಿಗೆ ಕೊನೆಯಿಲ್ಲ. ಒಂದು ಅನುಮಾನವನ್ನು ದೂರ ಮಾಡಿದರೆ, ಮತ್ತೊಂದು ಏಳುತ್ತದೆ. ಒಂದು ಮರದ ಒಂದೊಂದೇ ಎಲೆಗಳನ್ನು ಕಿತ್ತಂತೆ ಇದು. ಎಲ್ಲಾ ಎಲೆಗಳನ್ನು ತೆಗೆದರೂ, ಮತ್ತೆ ಎಲೆಗಳು ಚಿಗುರುವುದಿಲ್ಲವೇ. ಆದ್ದರಿಂದ ಆ ಮರವನ್ನೇ ಬುಡಸಮೇತ ಕಿತ್ತು ತೆಗೆಯಬೇಕು.

ಪ್ರಶ್ನೆ. ಹಾಗಾದರೆ ನಾವು ಅನುಮಾನವನ್ನೇ ಹೊಂದಬಾರದೇ? ಏನು ಮಾಡಬೇಕು?
ಮಹರ್ಷಿ. ಇಲ್ಲ. ಯಾರು ಅನುಮಾನಿಸುತ್ತಾ ಇರುವರೋ ಅವನನ್ನು ಮೊದಲು ಚೆನ್ನಾಗಿ ತಿಳಿಯಬೇಕು. ಯಾರಾದರೂ ಶಂಕಿಸುವನನ್ನು ಅನುಮಾನದಿಂದ ನೋಡುವರೇ?

ಪ್ರಶ್ನೆ. ಮಹರ್ಷಿಗಳೇ ನನಗೆ ಉಸಿರುಕಟ್ಟಿದಂತೆ ಆಗಿದೆ.
ಮಹರ್ಷಿ. ಇಲ್ಲ ಇಲ್ಲ. ನಾನು ನಿನ್ನನ್ನು ಕಾಪಾಡುತ್ತೇನೆ. ಒಂದು ವೇಳೆ ನಾನು ಸಮರ್ಪಕವಾದ ಉತ್ತರವನ್ನು ಕೊಟ್ಟರೆ, ನಿನ್ನ ಎಲ್ಲಾ ಶಂಕೆಗಳು ದೂರವಾಗುತ್ತದೆಯೇ? ಸರಿ ನೋಡೋಣ.
ನಾನು ದೇಹ ಎನ್ನುತ್ತೀಯೆ. ನಾನು ಮನಸ್ಸು ಎನ್ನುತ್ತೀಯೆ. ಮೆದುಳು ಮುಂತಾದವುಗಳನ್ನು ಹೇಳುತ್ತೀಯೆ. ಹಾಗಾದರೆ ನಾನು ನಾನು ಎಂದು ಹೇಳುತ್ತಿರುವ ಈ ಮನಸ್ಸು ಯಾವುದು? ಇವೆಲ್ಲಾ ಬರಿಯ ಯೋಚನೆಗಳು ಎನ್ನುತ್ತೀ ಆ "ನಾನು"

ಮನಸ್ಸಿನ ಒಂದು ಭಾಗ ಅಲ್ಲವೇ. ಆ ಮನಸ್ಸು ಈ ದೇಹದ ಒಂದು ಭಾಗ ಅಲ್ಲವೇ.

ಪ್ರಶ್ನೆ. ಅದೇ ಎಂದು ಹೇಳಲಾರೆ. ಇರಬಹುದು ಎಂದು ತಿಳಿಯುತ್ತೇನೆ.

ಮಹರ್ಷಿ. ಹಾಗಾದರೆ ಮುಂದೆ ಸಾಗೋಣವೇ?
ನಿನ್ನ ಈ ಮನಸ್ಸು, ಮೆದುಳಿನಲ್ಲಿ ಇದೆ, ಅಥವಾ ಮೆದುಳೇ ಮನಸ್ಸಾಗಿದೆ, ಮೆದುಳಿನಲ್ಲಿ ಮನಸ್ಸು ಇದೆ, ಎಂದು ನೀನು ತಿಳಿದಿದ್ದೀಯೆ. ನಿನ್ನ ಪ್ರಕಾರ ನೀನು ಮೆದುಳಿಗಿಂತ ಭಿನ್ನವಾಗಿರುವ ವಸ್ತು ಎನ್ನುತ್ತೀಯೆ. ಆ ನಿನ್ನತನ ಮೆದುಳುಗಿಂತ ಬೇರೆ ಅಲ್ಲ ಎಂದು ತಿಳಿಯುತ್ತೀಯೆ. ಹೌದೋ? ಇಲ್ಲವೋ? ಹಾಗಾದರೆ, ನಮ್ಮ ದೇಹದಲ್ಲಿ ನಮ್ಮ ಯೋಚನೆಗಳು, ಸುಖ-ದುಃಖಗಳು, ಭಾವನೆಗಳು, ಆಸೆಗಳು, ಉದ್ವೇಗಗಳು, ಪ್ರವೃತ್ತಿಗಳು ಮತ್ತು ಏನೆಲ್ಲವನ್ನು ಅನುಭವಿಸುತ್ತಿದೆಯೊ ಮತ್ತು ಎಲ್ಲವೂ ಅಡಗಿದೆಯೋ ಅವುಗಳನ್ನು ಕಂಡುಹಿಡಿಯೋಣ. ಇದರ ಜೊತೆಗೆ ಆ "ನಾನು" ಎನ್ನುವುದನನ್ನೂ ಗುರುತಿಸಿಕೊಳ್ಳುತ್ತೀಯೆ. ಆ "ನಾನು" ಎನ್ನುವುದು ಒಂದು ಯೋಚನೆಯೊ ಅಥವಾ ಅನುಭವವೋ?

ಪ್ರಶ್ನೆ. ಭಾವನೆಗಳು ಅನಿಸಿಕೆಗಳು ಎಲ್ಲವೂ ದೇಹದ ನರನಾಡಿಗಳಿಂದ ಏಳುತ್ತಿರಬಹುದು. ಆದರೆ ಮನಸ್ಸು ಎನ್ನುವುದು ಮೆದುಳಿನಲ್ಲಿ ಕುಳಿತು ತಿಳಿಯುತ್ತಿಲ್ಲವೇ? ಇದನ್ನೇ ಪ್ರತಿಫಲನಕ್ರಮ ಎನ್ನುವುದಿಲ್ಲವೇ?

ಮಹರ್ಷಿ.  ಹಾಗಾದರೆ, "ನಾನು" ಎನ್ನುವುದು ಮನಸ್ಸಿನ ಅಂಗ ಎಂದು ನೀನು ತಿಳಿಯುವುದಾದರೆ, ಅದನ್ನು ನೀನು ಮೆದುಳಿನಲ್ಲಿ ಗುರುತಿಸುತ್ತೀಯೆ ಅಲ್ಲವೇ?  ನಿನ್ನ ಪ್ರಕಾರ ನಾನು ಎನ್ನುವುದು ಮನಸ್ಸಿನ ಒಂದು ಅವಿಭಾಜ್ಯ ಅಂಗ ಮತ್ತು ಭಾವನೆಗಳು ಮನಸ್ಸಿಗಿಂತ ಭಿನ್ನ ಮತ್ತು ಮನಸ್ಸು ಅದನ್ನು ಉಪಯೋಗಿಸುತ್ತದೆ  ಅಲ್ಲವೇ?

ಪ್ರಶ್ನೆ.  ಹೌದು ಒಪ್ಪಿಕೊಳ್ಳುತ್ತೇನೆ

ಮಹರ್ಷಿ.  ಹಾಗಾದರೆ ಈ "ನಾನು" ಎನ್ನುವುದು ಮೂಲಭೂತವಾದ ಯೋಚನೆ ಮತ್ತು  ಒಂದು ನಿಕಟ ಭಾವನೆ, ಒಂದು ತಿಳಿಯಬಹುದಾದ ಅರಿವು.  ಈ ಅರಿವು, ನೀನು ಗಾಢ ನಿದ್ರೆಯಲ್ಲಿ ಇದ್ದಾಗಲೂ, ಮನಸ್ಸು ಏನೂ ಕಾರ್ಯ ಮಾಡದೆ ಇರುವಾಗಲೂ, ಇದ್ದು ಕೊಂಡಿದೆ ಮತ್ತು ದೃಢವಾಗಿ ಇಲ್ಲವೇ? ಎಚ್ಚರದಲ್ಲಿ ನೀನು ಅಂದುಕೊಂಡ "ನಾನು" ನಿನ್ನ ಪ್ರಕಾರದ ದೇಹದ ಎಲ್ಲೋ ಒಂದು ಕಡೆ ಕೇಂದ್ರೀಕೃತವಾಗಿದೆ ಅಲ್ಲವೇ?

ಪ್ರಶ್ನೆ.  ಅದು ಎಲ್ಲಿದೆ?
ಮಹರ್ಷಿ. ಅದನ್ನು ನೀನು ಕಂಡುಹಿಡಿಯಬೇಕು. ಈ ದೇಹವನ್ನು ತುಂಡು ಮಾಡುವುದರಿಂದ ಅದನ್ನು ಕಂಡುಹಿಡಿಯಲು ಆಗಲಾರದು

ಪ್ರಶ್ನೆ.  ಹಾಗಾದರೆ ಮನಸ್ಸನ್ನು ಕತ್ತರಿಸಿ ನೋಡಬೇಕೇ?
ಮಹರ್ಷಿ.  ಹೌದು.  ನೀನು ಆ ಮನಸ್ಸು ಎನ್ನುವ ನಿನ್ನನ್ನೇ ಭೇದಿಸಿ ನೋಡಿ, ಆ ನಾನು ಎಲ್ಲಿದೆ ಎಂದು ತಿಳಿಯಬೇಕು.

ಆದ್ದರಿಂದಲೇ ನಾನು ಪದೇಪದೇ ಹೇಳುವುದು "ನಿನ್ನ ಬಗ್ಗೆ ತಿಳಿದುಕೋ"

ಪ್ರಶ್ನೆ. ಆದರೆ ನಾನು ಎನ್ನುವುದಕ್ಕೆ ಒಂದು ಕೇಂದ್ರವಿದೆಯೇ?

ಮಹರ್ಷಿ. ಇದೆ. ಆ ಕೇಂದ್ರದಲ್ಲಿಯೇ, ಈ ಮನಸ್ಸು, ನಿದ್ರೆ ಮಾಡುವಾಗ, ನಿನ್ನ ಮೆದುಳಿನ ಕಾರ್ಯದಿಂದ ದೂರ ಸರಿದು ನಿಲ್ಲುತ್ತದೆ. ಅದನ್ನೇ "ಹೃದಯ" ಎನ್ನುತ್ತಾರೆ. ಅದು ನೀನು ತಿಳಿದಂತತಹ ರಕ್ತನಾಳಗಳಿಂದ ತುಂಬಿದ ವಸ್ತುವಲ್ಲ. ಅದು ನಿನ್ನ ಎದೆಯ ಅನಾಹತ ಚಕ್ರವೂ ಅಲ್ಲ. ಯೋಗದಲ್ಲಿ ತಿಳಿಸಿದ ಆರು ಚಕ್ರಗಳೂ ಅಲ್ಲ.

ಪ್ರಶ್ನೆ. ಹಾಗಾದರೆ ಅದು ಎಲ್ಲಿದೆ? ಒಂದುವೇಳೆ, ಆ ರೀತಿಯಾದ ಒಂದು ಕೇಂದ್ರ ಇರುವುದಾದರೆ, ಬ್ರಹ್ಮನ್ ಎಂಬುವುದೇ ಆತ್ಮ ಎಂದೂ, ಅದು ಎಲ್ಲೆಡೆಯಲ್ಲಿಯೂ ಇದೆ ಎಂದೂ, ಏಕೆ ಹೇಳಬೇಕು?

ಮಹರ್ಷಿ. ಮೊದಲು ಆ "ನಾನು" ಎಂಬುದು ನಿನ್ನ ದೇಹದಲ್ಲಿ ಎಲ್ಲಿ ಇದೆ ಎಂದು ಕಂಡುಹಿಡಿ. ಆನಂತರ ಬ್ರಹ್ಮನ್ ಮತ್ತು ಆತ್ಮಗಳ ಬಗ್ಗೆ ಯೋಚನೆ ಮಾಡುವೆಯಂತೆ.

ಪ್ರಶ್ನೆ. ಹೃದಯ ಎಲ್ಲಿದೆ ಎಂಬುದರ ಬಗ್ಗೆ ಮತ್ತು ಅದು ಹೇಗಿದೆ ಎಂದು ತಿಳಿಸಬೇಕು. ಇದರ ಸಂಶಯ ಮೊದಲು ನಿವಾರಣೆಯಾಗಬೇಕು. ನನ್ನ ಆತ್ಮದ ಸತ್ಯತೆಯ ಬಗ್ಗೆ ನನಗೆ ಗೊತ್ತಿಲ್ಲ, ಮತ್ತು ನನ್ನ ತಿಳುವಳಿಕೆ ಬಹಳ ಕಡಿಮೆ ಮತ್ತು ಅಪೂರ್ಣ. ನಿಮ್ಮ ಪ್ರಕಾರ "ನಾನು" ಎಂದರೆ "ಆತ್ಮ'. ಆದರೆ ಆತ್ಮ ಎನ್ನುವುದು ತನ್ನ ಬಗ್ಗೆ ತಿಳಿದಿರಬೇಕಲ್ಲವೇ? ನಾನಾದರೋ ಏನೂ ತಿಳಿಯದವನು.?

ಮಹರ್ಷಿ. ಎಲ್ಲರೂ ಈ ಗೊಂದಲಕ್ಕೆ ಸಿಕ್ಕಿಕೊಳ್ಳುತ್ತಾರೆ. ನೀನು ನೀನು ಎಂದು ಕರೆದು ಕೊಳ್ಳುತ್ತಿರುವ "ಆತ್ಮ" ನಿಜವಾದ, ಎಂದೆಂದೂ ಹುಟ್ಟದ, ಮತ್ತು ಸಾವಿಲ್ಲದ್ದು ಎಂದು ತಿಳಿಯಬೇಕು.

ಪ್ರಶ್ನೆ. ಹಾಗಾದರೆ ಈ ನಾನು ಎಂಬುದು ದೇಹದ ಒಂದು ವಿಭಾಗ ಅಥವಾ ದೇಹವೇ ಅಲ್ಲವೇ?

ಮಹರ್ಷಿ. ಆದರೆ ದೇಹ ಜಡ ಅಲ್ಲವೇ? ಅದಕ್ಕೆ ತಿಳುವಳಿಕೆ ಎಲ್ಲಿದೆ? ಅದನ್ನು ತಿಳಿಯಬಹುದೇ ವಿನಹ ಅದಕ್ಕೆ ತಿಳುವಳಿಕೆ ಎಂಬುದು ಇಲ್ಲ.

ಪ್ರಶ್ನೆ. ಹಾಗಾದರೆ "ನಾನು" ಎಂಬುದು,ಆತ್ಮನು ಅಲ್ಲ. ಈ ಆತ್ಮ ಎಂಬುದು ಇಲ್ಲವೇ ಇಲ್ಲ. ಅದು ಅನಾತ್ಮನೂ ಅಲ್ಲ, ಅಲ್ಲವೇ!

ಮಹರ್ಷಿ. ಜಡವಾದ ದೇಹಕ್ಕೂ ಮತ್ತು ಚೇತನಕ್ಕೂ ಮಧ್ಯೆ (ನಾನು ಮತ್ತು ದೇಹ ಎಂಬುದಕ್ಕೂ) "ಅಹಂಕಾರ" ಎಂಬ ಒಂದು ಜೀವಾತ್ಮ ಎಂದು ಕರೆಯಲ್ಪಡುವ ಆತ್ಮ ಇದೆ. ನೀನು ನಾನು ಅವನು ಎಂಬುವುದು ಎಲ್ಲಾ ಈ ಅಹಂಕಾರದ ಆತ್ಮ. ಇದು ಎಂದೆಂದೂ ಇದ್ದುಕೊಂಡಿರುವ ಆತ್ಮನಿಗಿಂತ ಬೇರೆಯಾಗಿದೆ. ಆದರೆ, ಈ ಆತ್ಮವು ಜೀವದಲ್ಲಿಯೂ, ಜಡದಲ್ಲಿಯೂ ಒಂದಾಗಿ ತೋರಿಕೊಳ್ಳುತ್ತದೆ.

ಪ್ರಶ್ನೆ. ಹಾಗಾದರೆ, ನಿನ್ನನ್ನು ತಿಳಿದುಕೋ ಎಂದು ನೀವು ಹೇಳುವಾಗ ಅಹಂಕಾರದ ನಾನು ಎನ್ನುವುದನ್ನು ತಿಳಿಯಬೇಕೇ?

ಮಹರ್ಷಿ. ಅಹಂಕಾರದ ನಾನು ಎಂಬುವುದು, ಆತ್ಮನನ್ನು ತಿಳಿಯ ಹೊರಟಾಗ ಅದರ ಪಾತ್ರವೇ ಬದಲಾಗುತ್ತದೆ. ಅದು ಈ ಜೀವದಲ್ಲಿ ತೊಡಗಿಸಿಕೊಳ್ಳುವುದನ್ನು ಕಡಿಮೆ ಮಾಡುತ್ತಾ ಹೋಗಿ ಮತ್ತು ಹೆಚ್ಚುಹೆಚ್ಚಾಗಿ ಆತ್ಮನಲ್ಲಿ ಬೇರೆಯಲು ಮೊದಲಾಗುತ್ತದೆ.

## ಆತ್ಮನ ರಹಸ್ಯ ಸ್ಥಳ

ಪ್ರಶ್ನೆ. ಹಾಗಾದರೆ ನಿನ್ನನ್ನು ತಿಳಿದುಕೋ ಎಂದಾಗ ಯಾವುದನ್ನು ಸೂಚಿಸುತ್ತೀರಿ

ಮಹರ್ಷಿ. "ನಾನು" ಎಂಬುದು ಯಾರೇ ಆಗಿದ್ದರೂ, "ನಿನ್ನನ್ನು ತಿಳಿದುಕೋ" ಎಂಬುವುದು ಒಂದು ಸಲಹೆ. ಅಹಂಕಾರದಲ್ಲಿನ "ನಾನು" ಆತ್ಮನ ಬಗ್ಗೆ ತಿಳಿಯಲು ಮೊದಲುಮಾಡಿದಾಗ ತನ್ನ ನೆಲೆಯನ್ನು ಬಿಟ್ಟು ಮೇಲೆದ್ದು ಅಂತರಾಳದಲ್ಲಿ ಮುಳುಗಿ, ನಿಜವಾದ ಆತ್ಮನನ್ನು ಮತ್ತು ಅದರ ನೆಲೆಯನ್ನು ಕಂಡುಕೊಳ್ಳುತ್ತದೆ. ಆದ್ದರಿಂದ ಅಹಂಕಾರದ ನಾನು ಎಂಬ ಅನ್ವೇಷಣೆ, ಆತ್ಮನಲ್ಲಿ ಅನುಭವಕ್ಕೆ ಬಂದಾಗ ಕೊನೆಗೊಳ್ಳುತ್ತದೆ.

ಪ್ರಶ್ನೆ ಹೃದಯವು ಆತ್ಮನ ಕೇಂದ್ರಸ್ಥಾನ ಎಂದು ಹೇಳಿದ್ದೀರಿ?

ಮಹರ್ಷಿ. ಹೌದು. ಅದೇ ಆತ್ಮನ ಸರ್ವೋಚ್ಚ ಸ್ಥಾನ. ಅದರ ಬಗ್ಗೆ ಯಾವ ಸಂಶಯವೂ ಇಲ್ಲ. ನಿಜವಾದ ಆತ್ಮನು, ಜೀವ ಅಥವಾ ಅಹಂಕಾರದ ಹಿಂದೆ ಹೃದಯದಲ್ಲಿ ನೆಲೆಸಿದೆ.

ಪ್ರಶ್ನೆ. ಹಾಗಾದರೆ ಹೃದಯವು ದೇಹದ ಯಾವ ಭಾಗದಲ್ಲಿದೆ?

ಮಹರ್ಷಿ. ಅದನ್ನು ಮನಸ್ಸಿನಿಂದ ತಿಳಿಯಲಾಗದು. ಯೋಚನೆ ಮತ್ತು ಕಲ್ಪನೆಗಳಿಂದ ಅದನ್ನು ಅರಿಯಲು ಖಂಡಿತವಾಗಿ ಆಗುವುದಿಲ್ಲ. (ಮಹರ್ಷಿಗಳು, ಎದೆಯ ಬಲಭಾಗವನ್ನು ಮುಟ್ಟುತ್ತಾ, ಹೃದಯ ಇಲ್ಲಿ ಇದೆ ಎಂದು ತಿಳಿಸಿದಾಗ,) ಅದನ್ನು ನೇರವಾಗಿ ತಿಳಿಯಬೇಕಾದರೆ, ಊಹಾಪೋಹ ಮತ್ತು ಭ್ರಮೆಯನ್ನು ಬಿಟ್ಟು ನೀನಾಗಿಯೇ ಇರಲು ಮೊದಲು ಆಗಬೇಕು. ಆಗ ಹೃದಯ ಸ್ಥಾನ ತಾನಾಗಿಯೇ ತನ್ನನ್ನು ಗುರುತಿಸಿಕೊಳ್ಳುತ್ತದೆ. ಹೃದಯದ ಸ್ಥಾನದ ಬಗ್ಗೆಯೇ ಶಾಸ್ತ್ರಗಳಲ್ಲಿ ಹೃತ್ ಗುಹಾ ಅಥವಾ ಹೃದಯದ ಗೂಡು ಎಂದು ಉಲ್ಲೇಖಿಸಿದೆ.

ಪ್ರಶ್ನೆ. ಅದು ಆ ಸ್ಥಾನದಲ್ಲಿ ಇದೆ ಎಂದು ನಾನು ಯಾವ ಪುಸ್ತಕದಲ್ಲಿಯೂ ಹೇಳಿರುವುದನ್ನು ನೋಡಿಲ್ಲವಲ್ಲ. ನಾನು ಇಲ್ಲಿಗೆ ಬಂದು ಬಹಳ ದಿನಗಳ ನಂತರ ಅಷ್ಟಾಂಗ ಹೃದಯ ಎಂಬ ಮಲಯಾಳಂ ಭಾಷೆಯ ಪದ್ಯವೊಂದನ್ನು ನೋಡಿದಾಗ (ಇದು ಆಯುರ್ವೇದದ ಬಗ್ಗೆ ಪುಸ್ತಕ) ಆಯುರ್ವೇದದ ಪುಸ್ತಕದಲ್ಲಿ ಹೃತ್ ಸ್ಥಾನ ಎಂಬುದು ಹೃದಯದ ಎದೆಯ ಬಲಭಾಗದಲ್ಲಿದೆ ಎಂದೂ, ಅದು ಆತ್ಮನ ವಾಸಸ್ಥಾನ ಎಂದೂ ಮತ್ತು ಅದನ್ನು ಸಂವಿತ್ ಎಂದೂ ತಿಳಿದುಕೊಂಡೆ. ಈ ರೀತಿಯಾಗಿ ತಿಳಿಸಿ ಹೇಳುವ ಬೇರೆ ಯಾವ ಗ್ರಂಥವನ್ನು ನಾನು ನೋಡಿಲ್ಲ. ಅಥವಾ ಅಂತಹ ಗ್ರಂಥವು ನನಗೆ ಇದುವರೆಗೆ ದೊರೆತಿಲ್ಲ.

ಹಾಗಾದರೆ ನಮ್ಮ ಪೂರ್ವಿಕರು ಈ ಸ್ಥಳವನ್ನು "ಹೃದಯ" ಎಂದು ತಿಳಿಸಿರುವುದನ್ನು, ನಾನು ಖಚಿತಪಡಿಸಬಹುದೇ?

ಮಹರ್ಷಿ.  ಹೌದು. ಅದು ಹಾಗೆಯೇ ಸರಿ. ಅದನ್ನು ಗುರುತಿಸುವ ಬದಲು, ಅದರ ಅನುಭವವನ್ನು ಹೊಂದಬೇಕು. ಕಣ್ಣು ಎಲ್ಲಿದೆ ಎಂದು ಯಾರಾದರೂ ಕಂಡುಹಿಡಿಯುತ್ತಾರೆಯೆ? ಇಲ್ಲ ಅಲ್ಲವೇ? ಅದೇ ರೀತಿ, ಹೃದಯವು ಯಾವಾಗಲೂ ಅಲ್ಲೇ ಇದೆ. ಅದು ಅಲ್ಲಿಂದ ನಿನ್ನ ಎಲ್ಲಾ ಚಟುವಟಿಕೆಗಳಿಗೆ ಆಧಾರವಾಗಿ ನಿನಗೆ ತಿಳಿಯದಂತೆ ಕಾರ್ಯ ಮಾಡುತ್ತಿದೆ.
ಆತ್ಮನೇ "ಹೃದಯ" ಎಂದು ಹೇಳುವುದು ಬಹಳ ಸೂಕ್ತ, ಏಕೆಂದರೆ ಅದು, ಹೃದಯದಲ್ಲಿನ ಕೇಂದ್ರವಲ್ಲವೇ? ಅದು ಎಲ್ಲೆಲ್ಲೂ ಗೋಚರಿಸುತ್ತ ಇದ್ದು,  ಅದೇ ಅರಿವಿನ "ಇರುವಿಕೆ" ಅಲ್ಲವೇ? ಆದ್ದರಿಂದಲೇ ನಾನು ಹೃದಯವೆಂಬುದು ನಿನ್ನ ಹೆಸರು (ಹೃತ್ ಅಯಂ) ಎಂದು ಗುರುತಿಸಿದ್ದೇನೆ.

ಪ್ರಶ್ನೆ.. ಬೇರೆ ಯಾರಾದರೂ ದೇವರು ಎಂಬವನನ್ನು ಈ ರೀತಿಯಾಗಿ ಸಂಭೋಧನೆ ಮಾಡಿದ್ದಾರೆಯೇ?
ಮಹರ್ಷಿ. ನಾನು ಈ ರೀತಿ ಹೇಳಿದ  ಬಹಳ ದಿನಗಳ ಬಳಿಕ, ತೇವಾರಂ ಎಂಬ ಮಾಲಿಕೆಯಲ್ಲಿ  ಹೇಳಿರುವ, "ಅಪ್ಪರ್ ಉಳ್ಳವರ್" ಎಂಬ  ಮುಖ್ಯ ಪದವನ್ನು ಹೃದಯ ಎಂದು ತಿಳಿದಿದ್ದೇನೆ.

ಪ್ರಶ್ನೆ.  ಆ ಪುರುಷನ ಮೂಲಸ್ಥಾನ ಹೃದಯ ಎಂದು ನೀವು ತಿಳಿಸಿದ ಮೇಲೆ ಅದು ಯಾವುದಾದರೂ  ಆರು ಚಕ್ರಗಳಲ್ಲಿ ಸ್ಥಾಪಿತ ವಾಗಿ?ದೆಯೇ?

ಮಹರ್ಷಿ.  ಯೋಗಶಾಸ್ತ್ರದಲ್ಲಿ ತಿಳಿಸಿರುವ ಆರು ಚಕ್ರಗಳು ನರನಾಡಿಗಳ ಕೇಂದ್ರ ಸ್ಥಾನಗಳು.  ಅವುಗಳು, ತಿಳುವಳಿಕೆ ಅಥವಾ ಜ್ಞಾನದ  ವಿವಿದ ಹಂತಗಳ ಮೆಟ್ಟಲುಗಳು.

ಮೂಲಾಧಾರ ಮೊದಲ್ಗೊಂಡು, ಸಹಸ್ರದಳ ಪದ್ಮ ಎಂದು ಕರೆಯುವ ಸಹಸ್ರಾರದಲ್ಲಿ ಕೊನೆಗೊಂಡು, ಇಲ್ಲಿ, ದೇಹದ ವಿಶಿಷ್ಟ ಶಕ್ತಿ, ಕೇಂದ್ರೀಕೃತವಾಗಿದೆ. ಆದರೆ "ಆತ್ಮನ್" ಎಂಬುದು, ಈ ಎಲ್ಲ ಶಕ್ತಿಗಳ  ಚಲನೆಗಳಿಗೆ ಆಧಾರವಾಗಿ ಇರುವುದೇ ಹೊರತು, ಅದು, ಅಲ್ಲಿ  ನಿಲ್ಲದೆ, ಹೃದಯದಲ್ಲಿ ಕೇಂದ್ರೀಕೃತವಾಗಿದೆ.

ಪ್ರಶ್ನೆ.   ಇದು ಶಕ್ತಿಯ ಗುರುತಿಸುವುದಕ್ಕಿಂತ ಬೇರೆ ಅಲ್ಲವೇ?

ಮಹರ್ಷಿ. ನಿಜವಾಗಿ ಹೇಳಬೇಕಾದರೆ, ಆತ್ಮನನ್ನು ಬಿಟ್ಟು ಯಾವ ಶಕ್ತಿಯನ್ನು ಸ್ಪಷ್ಟಪಡಿಸಲೂ ಆಗುವುದಿಲ್ಲ. ಆತ್ಮನೇ ಎಲ್ಲರೀತಿಯ ಶಕ್ತಿಯೇ ಆಗಿರುವುದು.
ಯೋಗಿಯು, ಯಾವಾಗ ನನ್ನ ಸಮಾಧಿಸ್ಥಿತಿಯ ಉನ್ನತ ಸ್ಥಾನವನ್ನು ತಲಪುವನೋ, ಆಗ ಅವನನ್ನು ಆಧಾರವಾಗಿ ನಿಲ್ಲಿಸಬಲ್ಲದ್ದು, ಈ ಆತ್ಮನೇ. ಅದು ಅವನಿಗೆ ಗೊತ್ತಿರಬಹುದು ಅಥವಾ  ಗೊತ್ತಿಲ್ಲದೆ ಇರಬಹುದು.
ಆದರೆ, ಹೃದಯದಲ್ಲಿ ಅವನಿಗೆ "ಅರಿವು" ಮೂಡಿದಾಗ, ಯಾವ ಯಾವ ಸ್ಥಿತಿಯಲ್ಲಿ ಅವನು ನೆಲೆಸಿದ್ದರೂ, ಅವೆಲ್ಲವೂ, ಒಂದೇ ಸತ್ಯ, ಒಂದೇ ಹೃದಯ, ಒಂದೇ ಆತ್ಮ, ಒಂದೇ ಚೇತನ, ಸರ್ವಥಾ ನಿರಂತರವಾಗಿ ಮಾರ್ಪಾಟಿಗೆ ಒಳಪಡದೆ ಇರುವ ಶಕ್ತಿ ಎಂದು ತಿಳಿಯುತ್ತದೆ.
ತಂತ್ರಶಾಸ್ತ್ರದಲ್ಲಿ, ಇದನ್ನು "ಸೂರ್ಯಮಂಡಲ" ಅಥವಾ "ಸೂರ್ಯನ ವೃತ್ತ ರೇಖೆ" ಅಥವಾ ಗೋಳ ಎಂದೂ ಮತ್ತು "ಸಹಸ್ರಾರವನ್ನು",ಚಂದ್ರಮಂಡಲ ಅಥವಾ "ಚಂದ್ರರೇಖೆ" "ಚಂದ್ರನ ವೃತ್ತ ರೇಖೆ" ಎಂದು ಕರೆದಿರುತ್ತಾರೆ.
ಈ ಎರಡು ವಿಭಜನೆಗಳು ಆತ್ಮನ ಸ್ಥಾನ ಮತ್ತು ಶಕ್ತಿಯ ಸ್ಥಾನಗಳ ಪ್ರಾಮುಖ್ಯತೆಯನ್ನು ತಿಳಿಸುವುದಕ್ಕಾಗಿ ಇದೆ.

## ದೇಹಾಲಅನುಭವ ಮತ್ತು ಸಾಕ್ಷಾತ್ಕಾರ

ಪ್ರಶ್ನೆ. ಹಾಗಾದರೆ ಬಂಧ ಜೀವಿಗೂ ಮುಕ್ತ ಜೀವಿಗೂ ಏನು ವ್ಯತ್ಯಾಸ?

ಮಹರ್ಷಿ. ಹೃದಯ ಸ್ಥಾನ ಅಥವಾ ಆತ್ಮನ ಕೇಂದ್ರದಿಂದ, ಸಹಸ್ರಾರ ಅಥವಾ ಶಕ್ತಿ ಸ್ಥಾನ ಎಂಬಲ್ಲಿಗೆ ಒಂದು ಸೂಕ್ಷ್ಮ ಮಾರ್ಗವು ಇದೆ. ಸಾಧಾರಣ ಮನುಷ್ಯನು ತನ್ನನ್ನು, ಹೃದಯದಲ್ಲಿ ಗುರುತಿಸಿಕೊಳ್ಳದೆ, ಮೆದುಳಿನಲ್ಲಿ ಗುರುತಿಸಿ ಕೊಳ್ಳುತ್ತಾನೆ. ಆದರೆ ಜ್ಞಾನ ಸಿದ್ದನು, ತನ್ನನ್ನು ಹೃದಯದಲ್ಲಿ ಗುರುತಿಸಬಲ್ಲ. ಎಲ್ಲಾ ಪುರುಷರಲ್ಲಿಯೂ ವಿಷಯಗಳಲ್ಲಿಯೂ, ಅವನು ಸಂಚರಿಸುತ್ತಿದ್ದಾಗ, ಅವನಿಗೆ ಒಂದೇ ಒಂದು ಉತ್ಕೃಷ್ಟವಾದ ಶ್ರೇಷ್ಠವಾದ ಸತ್ಯತೆ ಎಲ್ಲದರಲ್ಲಿಯೂ ಇರುವುದು ಖಚಿತವಾಗಿ ತಿಳಿಯುತ್ತದೆ.

ಪ್ರಶ್ನೆ. ಸಾಧಾರಣ ಮನುಷ್ಯರ ಬಗ್ಗೆ ಏನು?

ಮಹರ್ಷಿ. ಆಗಲೇ ನಾನು ಹೇಳಿದಂತೆ, ಸಾಧಾರಣ ಮನುಷ್ಯನು, ತನ್ನನ್ನು ಹೊರತುಪಡಿಸಿ, ಎಲ್ಲವನ್ನು ಹೊರಗೆ ಇರುವಂತೆ, ನೋಡುತ್ತಾನೆ. ತನ್ನ ಆತ್ಮನಿಗಿಂತ ಬೇರೆಯಾಗಿ ಪ್ರಪಂಚವನ್ನು ಗ್ರಹಿಸುತ್ತಾನೆ. ಇದಕ್ಕೆ, ಆತ್ಮನೇ ಎಲ್ಲ ಕಾರಣ, ಎನ್ನುವುದನ್ನು ಮರೆತು ಬಿಡುತ್ತಾನೆ.
ಆದರೆ, ಯಾರು,, ಆ ಶ್ರೇಷ್ಠ ಸತ್ಯತೆಯನ್ನು, ತನ್ನಿಂದ ಬೇರೆ ಅಲ್ಲದ ವಸ್ತು ಎಂದು ತಿಳಿಯುತ್ತಾನೆಯೊ, ಅವನಿಗೆ ಎಲ್ಲವೂ, ಪ್ರಪಂಚವೂ, ಆತ್ಮನ ಒಂದು ತೋರಿಕೆಯೇ, ಎಂದು ಖಚಿತವಾಗುತ್ತದೆ. ಅವನಿಗೆ ಪ್ರತಿಯೊಂದು ವಸ್ತುವೂ, ಆತ್ಮ ಸ್ವರೂಪವಾಗಿಯೇ ಗೋಚರಿಸುತ್ತದೆ. ಈ ರೀತಿಯಾಗಿ

ನಿರಂತರವಾಗಿ, ಅವಿಚ್ಛಿನ್ನವಾಗಿ, ಮಾರ್ಪಾಡು ಇಲ್ಲದ, ಒಂದು ವಸ್ತು, ಮಾರ್ಪಾಡು ಆಗಬಲ್ಲ ಮತ್ತು ನಶಿಸಿಹೋಗುವ ಎಲ್ಲದರಲ್ಲಿಯೂ ಕಾಣುತ್ತಾನೆ.

ಪ್ರಶ್ನೆ. ನೀವು ಜ್ಞಾನದ ಉನ್ನತ ಜ್ಞಾನದ ನೆಲೆಯಲ್ಲಿ ಹೇಳುತ್ತಾ ಮಾತನಾಡುತ್ತಾ ಇದ್ದೀರಿ. ನಾನು ಈ ದೇಹದಿಂದ ಮೊದಲು ಮಾಡುತ್ತಿದ್ದೇನೆ. ಹಾಗಾದರೆ ದೇಹದ ಎಲ್ಲ ಅನುಭವಗಳಿಗೆ ಜ್ಞಾನಿಗೂ ಅಜ್ಞಾನಿಗೂ, ವ್ಯತ್ಯಾಸವಿದೆಯೆ?

ಮಹರ್ಷಿ. ವ್ಯತ್ಯಾಸ ಇದೆ. ಎಷ್ಟೋ ಬಾರಿ, ನಾನು ಇದನ್ನು ಖಚಿತಪಡಿಸಿದ್ದೇನೆ.

ಪ್ರಶ್ನೆ. ಹಾಗಾದರೆ ಅಭ್ಯಾಸದಿಂದ ಅನುಭವ ಹೊಂದುವುದಕ್ಕೂ, ವೇದಾಂತದ ಮೂಲಕ ತಿಳಿದ ಜ್ಞಾನಕ್ಕೂ, ವ್ಯತ್ಯಾಸವಿದೆಯೇ? ನೀವು, ಮತ್ತೆ ಮತ್ತೆ ಹೇಳುವ ಹೃದಯದಲ್ಲಿನ ನಿಜವಾದ ಆತ್ಮನ ಅರ್ಥವೇನು?

ಮಹರ್ಷಿ. ನಿನ್ನನ್ನು ನೀನು ಕಳೆದುಕೊಳ್ಳುತ್ತಾ, ಅಂತರಾಳಕ್ಕೆ ಹೋದಾಗ, "ಆತ್ಮ" ಎನ್ನುವ ವಸ್ತು, ನಿನ್ನ ಹಿಂದೆಯೇ ಇದ್ದು, ನಿನ್ನನ್ನು ಸೆಳೆದುಕೊಳ್ಳುತ್ತದೆ. ಇದು ಒಂದು ರೀತಿಯ ಜ್ಞಾನದ ಹೊಳೆಯುವಿಕೆ ಮತ್ತು ಅದರ ಅರಿವು ನಿನಗೆ ಆಗುತ್ತದೆ. ಅದನ್ನು ನೀನು ಕೇಳಬಹುದು, ತಿಳಿಯಬಹುದು. ಇದನ್ನೇ ನಾನು "ಅಹಂಸ್ಫೂರ್ತಿ" ಎಂದು ಕರೆಯುವುದು.

ಪ್ರಶ್ನೆ. ಆತ್ಮನು ಸರ್ವವ್ಯಾಪಿ, ಸ್ವಯಂ ಜ್ಯೋತಿ, ಮತ್ತು ಮಾರ್ಪಾಡು ಆಗದ ವಸ್ತು ಎಂದು ಹೇಳುತ್ತೀರಿ? ಆದರೆ ನಿಮ್ಮ ಅಹಂಸ್ಫೂರ್ತಿಯ ಹೊಳೆಯುವಿಕೆ, ಒಂದು ಚೇತನದ

ಚಲನವಲನ ವಲ್ಲವೇ? ಅದು ಹೇಗೆ ತಾನೇ ಸಂಪೂರ್ಣ ಸಾಕ್ಷಾತ್ಕಾರ ಆಗಬಲ್ಲದು? ಏಕೆಂದರೆ ಸಾಕ್ಷಾತ್ಕಾರದಲ್ಲಿ ಚಲನೆಯೇ ಇಲ್ಲವಲ್ಲ?

ಮಹರ್ಷಿ. ಸಂಪೂರ್ಣ ಸಾಕ್ಷಾತ್ಕಾರ ಎಂದು ನೀನು ಹೇಳುವುದಕ್ಕೆ ಅರ್ಥವೇನಿದೆ? ಅಂದರೆ, ಒಬ್ಬನು ಕಲ್ಲಿನಂತೆ ಜಡವಾಗಿ ಇದ್ದುಬಿಡಬೇಕೇ? ಈ "ಆಹಂವೃತ್ತಿ", "ಅಹಂಸ್ಫೂರ್ತಿ" ಎನ್ನುವುದಕ್ಕಿಂತ ಭಿನ್ನ. ಆಹಮ್ ವೃತ್ತಿಯು, ಅಹಂಕಾರದ ಚಟುವಟಿಕೆ. ಮತ್ತು ಅದು ತನ್ನ ಇರುವಿಕೆಯನ್ನು ಕಳೆದುಕೊಂಡಾಗಲೇ ಮತ್ತೊಂದಕ್ಕೆ ದಾರಿ ಆಗುತ್ತದೆ. ವೇದಾಂತಶಾಸ್ತ್ರದ ಪ್ರಕಾರ ಅಹಂಸ್ಫೂರ್ತಿ ಎನ್ನುವುದಕ್ಕೆ ವೃತ್ತಿಜ್ಞಾನ ಎನ್ನುತ್ತಾರೆ. ಜ್ಞಾನದ ಸಾಕ್ಷಾತ್ಕಾರವು, ಒಂದು ವೃತ್ತಿ. ಆದ್ದರಿಂದ ವೃತ್ತಿ ಜ್ಞಾನಕ್ಕೂ, ಸ್ವರೂಪ ಜ್ಞಾನಕ್ಕೂ ಬಹಳ ವ್ಯತ್ಯಾಸವಿದೆ. "ಸ್ವರೂಪ" ಎಂದರೆ, ಬರಿಯ ಜ್ಞಾನ ಅಷ್ಟೇ.
ಸ್ವರೂಪ ಎಂದರೆ ಸತ್- ಚಿತ್. ಇದು ಸರ್ವವ್ಯಾಪಿಯಾಗಿ ಇರುವುದು. ಸ್ವತಃಸಿದ್ಧವಾಗಿ ಎಲ್ಲೆಡೆಯಲ್ಲಿಯೂ ಇರುವುದು. ಅದರೆ, ಸಾಕ್ಷಾತ್ಕಾರ ಎಂದಾಗ, ಅಂತಹ ಅವಸ್ಥೆಗೆ ವೃತ್ತಿ ಜ್ಞಾನ ಎನ್ನುತ್ತಾರೆ. ಇದು ನಿನ್ನ ಅಸ್ತಿತ್ವಕ್ಕೆ ನಿರ್ಣಾಯಕವಾಗಿ, ನೀನು ತಿಳಿಯುತ್ತಿರುವ ವಿಷಯವನ್ನು ಜ್ಞಾನ ಅಥವಾ ಸಾಕ್ಷಾತ್ಕಾರ ಎನ್ನುತ್ತೇವೆ. ಆದ್ದರಿಂದ ನಾವು "ಜ್ಞಾನ" ಎಂದಾಗ ಅದು ವೃತ್ತಿ ಜ್ಞಾನವೇ ಹೊರತು ಸ್ವರೂಪ ಜ್ಞಾನವಲ್ಲ. ಏಕೆಂದರೆ ಸ್ವರೂಪವೇ."ಜ್ಞಾನಾತ್ಮ".. ಅದು,ಎಂದೆಂದಿಗೂ ಇದ್ದುಕೊಂಡಿರುವ ನೆಲೆ.

ಪ್ರಶ್ನೆ.  ಮಹರ್ಷಿಗಳೇ ನನಗೆ ಇಲ್ಲಿಯವರೆಗೆ ತಿಳಿಯಿತು. ಆದರೆ ದೇಹದ ಬಗ್ಗೆ ಏನು?  ವೃತ್ತಿ ಜ್ಞಾನವನ್ನು ದೇಹದಲ್ಲಿ ಹೇಗೆ,ತಿಳಿಯಬಲ್ಲೆ?

ಮಹರ್ಷಿ.  ನೀನು ನಿನ್ನತನವನ್ನು ನಿನ್ನಲ್ಲೇ ಇರುವ ಯಾವಾಗಲೂ ಇರುವ ಅರಿವಿನಲ್ಲಿ ತಿಳಿಯಬಹುದು. ಸಂಪೂರ್ಣ ದೇಹವು ಒಂದು ಶಕ್ತಿ ಕೇಂದ್ರವಾಗಿ ಒಂದು ವಿದ್ಯುತ್ ಸಂಚಲನದಂತೆ ತಿಳಿಯುತ್ತದೆ.  ನಿನ್ನ ಜೀವನವು ಯಾವ ರೀತಿ,ಒಂದು ಸಣ್ಣ ಸೂಜಿ, ಅಯಸ್ಕಾಂತದ ಸೆಳೆತ ದಂತೆ ಆಗುತ್ತದೆಯೊ, ಅದೇ ರೀತಿ ಹೆಚ್ಚುಹೆಚ್ಚು ಅಂತರಾಳಕ್ಕೆ ಹೋದಂತೆlಲ್ಲಾ, ನೀನು ಬರಿಯ ಒಂದು ಕೇಂದ್ರಬಿಂದುವಿನಂತೆ, ಬರಿಯ ಪ್ರಜ್ಞೆಯ ಕೇಂದ್ರವಾಗಿ, ಯಾವ ರೀತಿಯ ಯೋಚನೆಗಳೇ ಆಗಲೀ, ಕರ್ತುತ್ವಗಳಾಗಲೀ ಇರದ ನೆಲೆಯಲ್ಲಿ, ಒಂದು ಸಣ್ಣ ಹುಲ್ಲು ಕಡ್ಡಿಯಂತೆ,ನಿನ್ನನ್ನು ನುಗ್ಗುತ್ತಿರುವ ಜ್ವಾಲೆಯೇ, ನೀನು ಆದಂತೆ, ಅನುಭವವನ್ನು ಹೊಂದುತ್ತೀಯೆ.  ಇದೇ ಜೀವಾತ್ಮನು ಬ್ರಹ್ಮನಲ್ಲಿ ವಿಲೀನವಾಗಿ ಇರುವಂತಹ ಘಟ್ಟ.  ಅಹಂಕಾರವು ಸಂಪೂರ್ಣವಾಗಿ ನಾಶವಾಗಿ, ಶುದ್ಧ ಆತ್ಮನ ನೆಲೆಯಾಗಿ ಪರಿವರ್ತನ ಆಗುತ್ತೀಯೆ.

## ಮುಕ್ತರು ಮತ್ತು ಸಿದ್ದಿಗಳು

ಪ್ರಶ್ನೆ.  ಇದುವರೆಗೆ ನನಗೆ ಮುಕ್ತಿಯ ಬಗ್ಗೆ ಬಹಳ ಹೆದರಿಕೆ ಇತ್ತು. ಅದು ಬಹಳ ಭಯಾನಕ ಎಂದುಕೊಂಡಿದ್ದೆ. ಈಗ ನನಗೆ ಅದು ಒಂದು ಪ್ರಿಯವಾದ ನೆಲೆ ಎಂದು ಎನಿಸುತ್ತದೆ. ಹಾಗಾದರೆ, ಮುಕ್ತಿಗೂ, ಸಿದ್ದಿಗಳಿಗೂ ಏನಾದರೂ ವ್ಯತ್ಯಾಸ ಅಥವಾ ಜೋಡಣೆ ಇದೆಯೇ?

ಮಹರ್ಷಿ ಆತ್ಮನಲ್ಲಿ ಲೀನವಾಗುವುದೇ ಅತ್ಯಂತ ಉನ್ನತ ಸಿದ್ಧಿ ಅದನ್ನೇ ಆತ್ಮಸಾಕ್ಷಾತ್ಕಾರ ಎನ್ನುವರು. ಒಂದು ಸಲ ಆ ಸತ್ಯವನ್ನು ಕಂಡುಕೊಂಡಲ್ಲಿ, ಮತ್ತೆ ಅಜ್ಞಾನ ಎನ್ನುವುದು ಏಳುವುದೇ ಇಲ್ಲ.

ಪ್ರಶ್ನೆ. ಸಿದ್ಧಿಗಳು ಎನ್ನುವುದು ಏನು?

ಮಹರ್ಷಿ. ಎರಡು ರೀತಿಯ ಸಿದ್ಧಿಗಳ ಬಗ್ಗೆ ವಿವರಣೆಯಿದೆ. ಒಂದು ಈ ಆತ್ಮನ ಅನುಭವಕ್ಕೆ ಅಡ್ಡಿ ಆಗಬಲ್ಲದು. ಮಂತ್ರಗಳ ಅಚ್ಚಾರಣೆಯಿಂದಲೂ ಮತ್ತು ಕೆಲವು ಔಷಧಿಗಳ ಸೇವನೆಯಿಂದಲೂ, ಕಠಿಣವಾದ ತಪಸ್ಸಿನಿಂದಲೂ ಅಥವಾ ಒಂದು ರೀತಿಯ ಸಮಾಧಿ ಅಭ್ಯಾಸದಿಂದಲೂ ಕೆಲವು ಶಕ್ತಿಗಳನ್ನು ಪಡೆಯಬಹುದು ಎನ್ನುತ್ತಾರೆ. ಆದರೆ ಅವು ಯಾವುವೂ, ಆತ್ಮನ ಜ್ಞಾನ ಅಲ್ಲ. ಇಂತಹ ಸಿದ್ಧಿಯನ್ನು ಪಡೆದಿದ್ದರೂ ನೀವು ಅಜ್ಞಾನದಿಂದ ಹೊರಬಂ ದಿರುವುದಿಲ್ಲ.

ಪ್ರಶ್ನೆ. ಹಾಗಾದರೆ ಮತ್ತೊಂದು ಸಿದ್ಧಿ ಯಾವುದು?
ಮಹರ್ಷಿ. ಎರಡನೆಯ ಸಿದ್ಧಿಯಲ್ಲಿ ಸಾಧಾರಣವಾದ ತಪಸ್ಸಿನಿಂದ, ವಿಚಾರ ವಿಮರ್ಶೆಯಿಂದ ಪಡೆದುಕೊಂಡ ಆತ್ಮನ ಅನುಭವವು ಆದಾಗ, ದೊರಕುವ ಶಕ್ತಿಯ ಚಲನೆ, ಮತ್ತು ಗೋಚರ ಮತ್ತು ಜ್ಞಾನ, ನಿನಗೆ ಸ್ವಾಭಾವಿಕವಾಗಿ ಇರುವುದು, ಸಿದ್ಧಿಗಳು ದೈವದತ್ತವಾಗಿ ನಿನಗೆ ಬರುವಂತಹ ಸ್ವಾಭಾವಿಕ ಅನುಭವ. ಇದು, ತನ್ನಷ್ಟಕ್ಕೆ ತಾನೇ ಬರುವಂತಹದ್ದು. ಅವರವರ ಕರ್ಮಗಳಿಗೆ ಅನುಗುಣವಾಗಿ ಬಂದರೂ, ಈ ರೀತಿಯಲ್ಲಿ, ಆತ್ಮ ನಿಷ್ಠೆಯನ್ನು ಹೊಂದಿದ ಸಿದ್ಧರು ಎಂದೆಂದೂ ವಿಚಲತೆಯನ್ನು ಹೊಂದುವುದಿಲ್ಲ. ಅಂತಹವರಿಗೆ, ಅದು

ಕಳೆದುಕೊಳ್ಳಲು ಆಗದ, ಆತ್ಮ ಸಿದ್ಧಿ ಎಂದು ಗೊತ್ತು. ಇವುಗಳು ಬರಿಯ ಪ್ರಯತ್ನ ಮಾಡುವುದರಿಂದ ಬರುವುದಿಲ್ಲ. ಈ "ಅರಿವು" ತನ್ನ ಇರುವಿಕೆಯಲ್ಲಿ ಇದ್ದಾಗಲೇ ಅದರ ಮಹತ್ವ ತಿಳಿಯಬಲ್ಲವರಾಗುತ್ತರೆ.

ಪ್ರಶ್ನೆ ಸ್ವಾಭಾವಿಕವಾದ ಸಿದ್ಧಿಯನ್ನು ತಪಸ್ಸಿನಿಂದ ಪಡೆದ ಮುಕ್ತರು, ಅಪರಿಮಿತ ಶಕ್ತಿಯನ್ನು ಹೊಂದಿ, ಅಂತರ್ಧಾನರಾಗಬಲ್ಲ ಸ್ಥಿತಿಯನ್ನು ಪ್ರದರ್ಶಿಸಬಲ್ಲರು ಎಂದು ನೀವು ಹೇಳುವಿರಲ್ಲಾ?

ಮಹರ್ಷಿ. ಹೌದು. ಇಂತಹ ಮುಕ್ತನೊಬ್ಬನಿಗೇ ಈ ರೀತಿಯ ಶಕ್ತಿಯು ಸಿಗಬಲ್ಲದು. ಆದರೆ, ಒಬ್ಬ ಜ್ಞಾನಿಯನ್ನು ಈ ರೀತಿಯಾದ ಶಕ್ತಿಗಳಿಂದ ಅಳೆಯಲು ಸಾಧ್ಯವಿಲ್ಲ. ಸಮತ್ವ ದೃಷ್ಟಿಯಲ್ಲಿ ಇರುವ ಮತ್ತು ಇರಬಲ್ಲ ಜ್ಞಾನಿಯೇ ಅತ್ಯಂತ ಶ್ರೇಷ್ಠನು.

ಪ್ರಶ್ನೆ. ಮಹರ್ಷಿಗಳೇ, ಎಲ್ಲಾ ಪರಿಹಾರವಾದರೂ ಒಂದೇ ಒಂದು ಶಂಕೆ ಉಳಿದಿದೆ .

ಮಹರ್ಷಿ. ಏನದು?
ಪ್ರಶ್ನೆ. ನಿಮ್ಮ ಪ್ರಕಾರ, ಹೃದಯವು ಅಹಂಕಾರದಿಂದ ಸ್ಫುರಿಸುತ್ತಿರುವ ಆತ್ಮನ ಒಂದು ನೆಲೆ ಎನ್ನುತ್ತೀರಿ. ಅದು ಹೇಗೆ?

ಮಹರ್ಷಿ. ಹೃದಯವು ಆತ್ಮನ ನಿಜವಾದ ನೆಲೆಯ ಸ್ಥಾನ. ಆದರೆ, ಅಹಂ ಎನ್ನುವುದು ನಾಶವಾಗುವ ಸ್ಥಿತಿ. ಈ ಆಹಮ್ ವೃತ್ತಿಯು, ಹೃದಯದ ಶಕ್ತಿಯಿಂದಲೇ ಬೆಂಬಲವನ್ನು ಹೊಂದಿದೆ.

ಆದರೆ, ಚೇತನ ಮತ್ತು ಜಡಗಳಾಗಿ ಇರುವ ಸೇತುವೆಯೇ ಜ್ಞಾತೃ. ಇದು ಒಂದು ರೀತಿಯ ಗಂಟು ಅಥವಾ ಗ್ರಂಥಿ. ಅಂದರೆ, ಬಲವತ್ತರವಾದ ಅಜ್ಞಾನದಲ್ಲಿ ನಿಂತ ನೆಲೆ. ಈ ಗ್ರಂಥಿಯು ಹೃತ್ ಎಂಬ ಹೃದಯದಲ್ಲಿದೆ. ಈ ಗ್ರಂಥಿಯನ್ನು ಭೇದಿಸಿದಾಗ, ನಿಜವಾದ ಆತ್ಮ ಗೋಚರಿಸುತ್ತದೆ. ಅದೇ ಆತ್ಮನ ಕೇಂದ್ರ.

ಪ್ರಶ್ನೆ ಇದರಿಂದ ಸಹಸ್ರಾರಕ್ಕೆ ಒಂದು ದಾರಿ ಇದೆ ಎಂದು ಹೇಳಿದ್ದೀರಲ್ಲಾ?

ಮಹರ್ಷಿ. ಹೌದು. ಬಂಧನಕ್ಕೆ ಒಳಗಾದವನಿಗೆ, ಈ ದಾರಿಯು ಮುಚ್ಚಲ್ಪಟ್ಟಿದೆ. ಈ ಹೃದಯ ಗ್ರಂಥಿ ಅಥವಾ ಅಹಂಕಾರದ ಗಂಟು ಕತ್ತರಿಸಿದಾಗ ಅಮೃತ ನಾಡಿ ಎಂಬ ಹೆಸರಿನ ಒಂದು ಶಕ್ತಿಯು, ಮೇಲೆ ಎದ್ದು, ಸಹಸ್ರಾರದ ಕಡೆಗೆ ಹೋಗುತ್ತದೆ.

ಪ್ರಶ್ನೆ. ಇದು ಸುಶುಮ್ನ ನಾಡಿಯೇ?

ಮಹರ್ಷಿ. ಅಲ್ಲ. ಇದು ಮೋಕ್ಷಕ್ಕೆ ಮತ್ತು ಬಿಡುಗಡೆಗೆ ದಾರಿ. ಇದನ್ನು, "ಅತ್ಮ ನಾಡಿ", "ಬ್ರಹ್ಮ ನಾಡಿ" "ಅಮೃತ ನಾಡಿ" ಎಂದು ಉಪನಿಷತ್ತುಗಳು ಉಲ್ಲೇಖಿಸಿದೆ. ಈ ರೀತಿಯ ದಾರಿಯು ತೆರೆದುಕೊಂಡಾಗ, ಯಾವ ರೀತಿಯ ಮೋಹವೂ ಇರುವುದಿಲ್ಲ. ಅಜ್ಞಾನವೂ ಇರಲಾರದು. ಮಾತನಾಡುವಾಗ, ಮಾತನಾಡದೆ ಇರುವಾಗ, ನಡೆದಾಡುವಾಗ, ಮನುಷ್ಯರಲ್ಲಿ ಬೆರೆತು ಇರುವಾಗಲೂ, ಮತ್ತು ಯಾವ ರೀತಿಯ ಕಾರ್ಯಗತಿ ಆದರೂ ಈ ಆತ್ಮನ ನೆಲೆಯನ್ನು ಬಿಟ್ಟು ಇರಲಾಗುವುದಿಲ್ಲ.

ಪ್ರಶ್ನೆ.  ನಿಮ್ಮ ಮಾತುಗಳು ಒಗಟಿನಂತೆ ಇದೆ.  "ನಿನ್ನನ್ನು ತಿಳಿದುಕೋ".  "ನಾನೇ ಬ್ರಹ್ಮನ್ ಆಗಿದ್ದೇನೆ.," ""ಅರಿಯುವನನ್ನು ಅರಿತುಕೊ" ಎಂಬ ಮಾತುಗಳು ಬರಿಯ ಯೋಚನೆಯಿಂದ ಹೇಗೆ ಸಾಧ್ಯ? ಇದರಿಂದ  ಹೇಗೆ ಅನುಭವ ನನಗೆ ಉಂಟಾಗುತ್ತದೆ?

ಮಹರ್ಷಿ.  ಬಹಳ ಕಷ್ಟಕರ ಎನ್ನುವುದು ನಿಜ.  ನಿಜವಾದ ಶ್ರದ್ಧೆ ಇದ್ದು, ಅದರ ಬಗ್ಗೆ ಆಲೋಚಿಸಿದಾಗ, ಅದು ಸಾಧ್ಯ.
ಆದ್ದರಿಂದಲೇ ಅನುಗ್ರಹದ ಒಂದು ಅನುಭೂತಿ ಆಗಿರಬೇಕು, ಎಂದು ಹಿರಿಯರು ಹೇಳುತ್ತಾರೆ.  ಒಬ್ಬ ಜ್ಞಾನಿಯು ಪ್ರಭಾವದಿಂದ ಆ ಒಂದು ನಿಶ್ಯಬ್ದ ಸ್ಥಿತಿಯ ಕಡೆಗೆ ಮರಳಬಹುದು.  ಆತನು ಮಾತನಾಡುವುದೂ ಬೇಡ.

## ಪರಮಾತ್ಮನಲ್ಲಿ ಶರಣಾಗ ಬೇಕು

ಪ್ರಶ್ನೆ.  ನಿಮ್ಮ ಸಮಕ್ಷಮದಲ್ಲಿ ಇರುವಾಗ, ನನಗೆ ಯಾವ ರೀತಿಯ ಗೊಂದಲವೂ ಇರುವುದಿಲ್ಲ. ಆದರೆ ಬಾಹ್ಯ ಪ್ರಪಂಚಕ್ಕೆ ಬಂದು, ನನ್ನ ದೇಶದ ಬಗ್ಗೆ ಅಥವಾ ಸಮಾಜದ ಬಗ್ಗೆ ಚಿಂತಿಸಿದಾಗ, "ನಿನ್ನನ್ನು ತಿಳಿದುಕೋ" ಎಂಬ ನಿಮ್ಮ ಮಾತು ಜ್ಞಾಪಕಕ್ಕೆ ಬರುತ್ತದೆ.

ಮಹರ್ಷಿ.  ನಿನ್ನಲ್ಲಿ ಬಲಹೀನತೆ ಇದ್ದರೆ ಪ್ರಪಂಚಕ್ಕಾಗಲಿ, ದೇಶಕ್ಕಾಗಲಿ, ನಿನ್ನ ಸಮಾಜಕ್ಕಾಗಲಿ, ನೀನು ಏನು ಮಾಡಬಲ್ಲೆ? ಮೊದಲು ನೀನು ಬಲವತ್ತರ ಗೊಳ್ಳಬೇಕು. ಆದ್ದರಿಂದ ಸ್ವಂತ ಸಾಧನೆಯೇ ಬಹಳ ಉತ್ಕೃಷ್ಟವಾದ ಮತ್ತು ಉನ್ನತವಾದ ಬಲವನ್ನು ಕೊಡುತ್ತದೆ.  ಒಬ್ಬ ಜ್ಞಾನಿಯಾದ

ಕೂಡಲೇ, ಎಎಲ್ಲವನ್ನೂ ಕಳೆದುಕೊಳ್ಳುವನು ಎಂಬ ಭಯ ಮತ್ತು ಹೆದರಿಕೆ ಬೇಡ.

ಪ್ರಶ್ನೆ. ನನಗೆ ಆ ಹೆದರಿಕೆ ಇದೆಯಲ್ಲ?

ಮಹರ್ಷಿ. ಇರಕೂಡದು. ನೀನು ಒಂದು ಮಹತ್ತರವಾದ ಕಾರ್ಯಕ್ಕೆ ನಿಯೋಜಿಸಲ್ಪಟ್ಟಿದ್ದರೆ, ಅದು ಖಂಡಿತ ಕೈಗೂಡುವುದರಲ್ಲಿ ಸಂದೇಹವೇ ಇಲ್ಲ.

ಪ್ರಶ್ನೆ. ಹಾಗಾದರೆ, ನಾನು ತಪಸ್ಸು ಅಥವಾ ದೇವರಲ್ಲಿ ಮೊರೆ ಹೋಗುವುದಾಗಲಿ ಮಾಡದೇ ಇರಬೇಕೆ?
ಮಹರ್ಷಿ. ಹೌದು. ಆದರೆ ಇದಕ್ಕೆ ಸ್ವಲ್ಪ ಅಭ್ಯಾಸ, ಸ್ವಲ್ಪ ಸಾಧನೆಗಳು, ಆ ದೇವರನ್ನು ಹೊಂದಲು ನಿರಂತರವಾಗಿ ಇರಬೇಕು. ಈ ರೀತಿ ಸಾಧನೆ ನಡೆಸುತ್ತಿರುವಾಗ, ನೀನು ನಿನ್ನ ಆಸೆ-ಆಕಾಂಕ್ಷೆಗಳ ಬಗ್ಗೆಯೊ ಅಥವಾ ದೇವರ ಬಗ್ಗೆಯೊ ಏನಾದರೂ ಚಿಂತೆಯನ್ನು ನಡೆಸುತ್ತಾ ಇರುತ್ತೀಯಾ,? ಇಲ್ಲವಲ್ಲಾ?

ಪ್ರಶ್ನೆ. ಆಸೆಗಳಿಂದ ಕೂಡಿದ ಧ್ಯಾನ, ಧ್ಯಾನ ಅಲ್ಲವೇ ಅಲ್ಲ.

ಮಹರ್ಷಿ. ಸಕಾಮ ಮತ್ತು ನಿಷ್ಕಾಮಕರ್ಮಗಳು ಆಸೆಗಳಿಂದ ಕೂಡಿರಲಿ ಅಥವಾ ಇಲ್ಲದೇ ಇರಲಿ, ಅದೇ ಧ್ಯಾನ ಅದೇ ತಪಸ್ಸು, ಅದೇ ನಿಧಿಧ್ಯಾಸನಗಳು, ಅದರ ಬಗ್ಗೆ ಇವೆಯಲ್ಲವೇ?
ನಿನ್ನ ಆಸೆಗಳೆಲ್ಲಾ ನೆರವೇರದೇ ಇದ್ದರೂ ತಪಸ್ಸು ಎಂಬುವುದು ಬೆಳೆಯುತ್ತಲೇ ಇರುತ್ತದೆ. ಅದು ಕಡಿಮೆಯಾಗಲಾರದು. ಇದೇ ತಪಸ್ಸಿನ ನಿಜವಾದ ಗುಣ. ಭಕ್ತಿಗೂ ಇದೇ ಮಾತು.
ಈಗ ನಿನಗೆ ಒಂದು ಪ್ರಶ್ನೆ.

ಒಬ್ಬನು, ರೈಲಿನಲ್ಲಿ ಪ್ರಯಾಣ ಮಾಡುತ್ತಿರುವಾಗ, ತನ್ನ ಸಾಮಾನುಗಳನ್ನು ಎಲ್ಲಿ ಇಡುತ್ತಾನೆ?

ಪ್ರಶ್ನೆ. ಅವನು ತನ್ನ ಕುಳಿತ ಜಾಗದಲ್ಲಿ ಅಥವಾ ನಿಯೋಜಿತ ಸ್ಥಳದಲ್ಲಿ ಇಡುತ್ತಾನೆ.

ಮಹರ್ಷಿ. ಹಾಗೆಂದರೆ ಅವನು ಅದನ್ನು, ತನ್ನ ತಲೆಯ ಮೇಲೆ ಅಥವಾ ತೊಡೆಯ ಮೇಲೆ ಇಟ್ಟಿರುವುದಿಲ್ಲ ಅಲ್ಲವೇ?

ಪ್ರಶ್ನೆ. ಮೂರ್ಖರು ಅಂತಹ ಕೆಲಸ ಮಾಡುತ್ತಾರೆ.
ಮಹರ್ಷಿ. ಅವನನ್ನು ನೀನು ಮೂರ್ಖ ಎಂದು ಕರೆದರೆ, ನಿನ್ನೆಲ್ಲ ಹೊರೆಯನ್ನು ನಿನ್ನ ತಲೆಯಲ್ಲಿ ಇಟ್ಟುಕೊಂಡು, ಅಧ್ಯಾತ್ಮ ಮಾರ್ಗದಲ್ಲಿ ನಡೆಯಲು ಇಚ್ಛೆಯುಳ್ಳ ನೀನು ಶತಮೂರ್ಖ ಅಲ್ಲವೇ? ಅದು ವಿಚಾರ ಮಾರ್ಗವೇ ಆಗಲಿ ಭಕ್ತಿ ಮಾರ್ಗವೇ ಆಗಲಿ.

ಪ್ರಶ್ನೆ. ನನ್ನ ಎಲ್ಲಾ ಜವಾಬ್ದಾರಿಗಳನ್ನು ನಾನು ಹೇಗೆ ಬಿಡಲು ಸಾಧ್ಯ?
ಮಹರ್ಷಿ. ದೇವಸ್ಥಾನದ ಒಂದು ಗೋಪುರವನ್ನು ನೋಡು. ದೊಡ್ಡ ಎತ್ತರವಾದ ಗೋಪುರದಲ್ಲಿ ಬಹಳಷ್ಟು ಪ್ರತಿಮೆಗಳು ಇವೆ. ಗೋಪುರದ ನಾಲ್ಕು ಮೂಲೆಗಳಲ್ಲಿ ದೊಡ್ಡ ಪ್ರತಿಮೆ ಗಳು ಇದೆ. ನೀನು ನೋಡಿದ್ದೀಯಾ?

ಪ್ರಶ್ನೆ. ಹೌದು ನೋಡಿದ್ದೇನೆ.
ಮಹರ್ಷಿ. ಆ ಪ್ರತಿಮೆಗಳು ದೊಡ್ಡ ಗೋಪುರವನ್ನು ಹೊತ್ತಿದೆ.

ಪ್ರಶ್ನೆ  ಅದು ಹೇಗೆ ಸಾಧ್ಯ? ನೀವು ಹೇಳುವುದು ಏನು?
ಮಹರ್ಷಿ. ಈ ರೀತಿ ಮಾತನಾಡುವಾಗ, ನಾನೇ ಎಲ್ಲ ಜವಾಬ್ದಾರಿಗಳನ್ನು ಎಲ್ಲಾ ರೀತಿಯ ತೊಂದರೆಗಳನ್ನು ಹೊತ್ತುಕೊಂಡಿರುವೆ ಎನ್ನುವ ನೀನು, ಮೂರ್ಖನಲ್ಲವೇ? ಈ ಬ್ರಹ್ಮಾಂಡದ ಎಲ್ಲ ಭಾರವನ್ನು ಭಗವಂತ ಹೊತ್ತಿದ್ದಾನೆ. ನೀನು ಎಲ್ಲವನ್ನು ಹೊತ್ತಿರುವೆ ಎಂಬ ಭಾವನೆಯಲ್ಲಿ ಇರುವೆಯಲ್ಲಾ. ನಿನ್ನ ಎಲ್ಲಾ ಭಾರವನ್ನು ಅವನಿಗೆ ಒಪ್ಪಿಸಿ ಬಿಡು. ನೀನು ಏನು, ಹೇಗೆ, ಮಾಡಬೇಕು, ಎಂಬ ಎಲ್ಲವೂ, ನಿನ್ನನ್ನು ನಿಮಿತ್ತನಾಗಿ ಇಟ್ಟು ಕೊಂಡು ಸಮಯ ಬಂದಕೂಡಲೇ ನೆರವೇರುತ್ತದೆ. ಎಲ್ಲವೂ, ನಿನ್ನ ಇಚ್ಚೆಯಿಂದಲೇ ನಡೆಯುತ್ತದೆ ಎಂದು ತಿಳಿಯಬೇಡ. ಆಸೆ ಯಿಲ್ಲದಿದ್ದರೆ, ಏನೂ ಕೆಲಸ ಆಗಲಾರದು ನನ್ನಿಂದ, ಎಂದು ತಿಳಿಯಬೇಡ. ಆಸೆಗಳು ನಿಂಗೆ ಬೇಕಾದ ಶಕ್ತಿ ನೀಡಲಾರದು. ಶಕ್ತಿ ಎಲ್ಲಾ ಭಗವಂತನದ್ದು.

ಪ್ರಶ್ನೆ. ಅಂದರೆ, ನೀವು ನನಗೆ ಕರ್ಮ ಮಾರ್ಗದ ಆಗುಹೋಗಳ ಬಗ್ಗೆ ತಿಳಿಸುತ್ತಾ ಇರುವಿರಿ, ಅಂದುಕೊಳ್ಳಲೇ?

ಮಹರ್ಷಿ ಹೌದು. ಇದೇ ಮೂಲಭೂತ ತತ್ವ. ಕರ್ಮಯೋಗಕ್ಕಾಗಲೀ, ಭಕ್ತಿಯೋಗಕ್ಕಾಗಲೀ, ಜ್ಞಾನಯೋಗಕ್ಕಾಗಲೀ, ಎಲ್ಲವುದಕ್ಕೂ, ಇದೇ ಅಸ್ತಿತ್ವ. ಎಲ್ಲಾ ಮಾರ್ಗಗಳು ಮೊದಮೊದಲು ಬೇರೆಯಂತೆ ಕಂಡರೂ, ಅವು ಎಲ್ಲವೂ ಆ ನೆಲೆಗೆ ನಿನ್ನನ್ನು ಕರೆದುಕೊಂಡು ಹೋಗುತ್ತದೆ.

## ವಿವಿಧ ಆಶ್ರಮಗಳು ಮತ್ತು ಅದರ ಮಹತ್ವ

ಪ್ರಶ್ನೆ. ನಾಲ್ಕು ಆಶ್ರಮಗಳು ಮತ್ತು ಆ ವೃತ್ತಿಗಳ ಆಚರಣೆಗಳಲ್ಲಿ ನಮ್ಮನ್ನು ತೊಡಗಿಸಿಕೊಳ್ಳಬೇಕು ಎನ್ನುತ್ತಾರಲ್ಲ, ಇದರ ಅರ್ಥ ಏನು?
ಮಹರ್ಷಿ. ಇವುಗಳು ಸಾಮಾನ್ಯ ಮನುಷ್ಯನ ಜೀವನೋಪಾಯಕ್ಕಾಗಿ ಇದೆ. ಆದರೆ, ಒಬ್ಬ ಪಕ್ವವಾಗಿ ಪೂರ್ಣವಾಗಿ ಅಭಿವೃದ್ಧಿ ಹೊಂದಿರುವ, ಇದರ ಬಗ್ಗೆ ಚಿಂತಿಸಬೇಕಾಗಿಲ್ಲ. ಪರಿಪಕ್ವವಾದ ಯಾರೇ, ಯುವ ಕನಾಗಲಿ, ಮುದುಕನಾಗಲಿ. ಹೆಣ್ಣಾಗಲಿ, ಗಂಡಾಗಲಿ, ಬ್ರಾಹ್ಮಣನಾಗಲಿ, ಶೂದ್ರನಾಗಲಿ ಇದನ್ನು ಗಣನೆಗೆತಂದುಕೊಳ್ಳದೆ, ತನ್ನ ಸಾಧನೆಯಲ್ಲಿ ತೊಡಗಿರಬಹುದು.

ಪ್ರಶ್ನೆ. ಹಾಗಾದರೆ ಆಧ್ಯಾತ್ಮಿಕ ಜೀವನದಲ್ಲಿ ಇದಕ್ಕೆ ಏನು ಉಪಯೋಗ ಇಲ್ಲ ಎಂದಂತಾಯಿತು.?
ಮಹರ್ಷಿ. ಮೊದಲ ಮೂರು ಆಶ್ರಮಗಳು, ಸಾಧಾರಣ ಜೀವನ ನಡೆಸಲು ಇಟ್ಟಿರುವುದು. ಇದು ಸಾಧನೆಗೆ ಬಾಧಕ ಆಗದಂತೆ, ಮತ್ತು ಅಡ್ಡಿ ಆಗದಂತೆ, ರಚಿಸಲ್ಪಟ್ಟಿದೆ.

ಪ್ರಶ್ನೆ ಹಾಗಾದರೆ ನಾಲ್ಕನೆಯದು? ಸನ್ಯಾಸ?
ಮಹರ್ಷಿ. ಸಂನ್ಯಾಸ ಎಂದರೆ ಭಿಕ್ಷಾಪಾತ್ರೆಯನ್ನು ತೆಗೆದುಕೊಳ್ಳುವುದಾಗಲೀ, ತಲೆಯನ್ನು ಮುಂಡನ ಮಾಡಿಕೊಳ್ಳುವುದಾಗಲೀ ಕಾಷಾಯ ವಸ್ತ್ರ ಧರಿಸುವುದಾಗಲಿ, ಅಲ್ಲ. ಒಬ್ಬ ಬ್ರಹ್ಮಚಾರಿಯಾದ ಶಿಷ್ಯನು, ತ್ರಿಕರಣ ಶುದ್ಧಿ ಮತ್ತು ನಿಸ್ವಾರ್ಥ ಸೇವೆಯಿಂದ, ತನ್ನ ಬಳಗದ ಮತ್ತು ಇತರರ ಸೇವೆಗೆ ತನ್ನನ್ನು ತೊಡಗಿಸಿಕೊಂದಾಗ, ಉತ್ತಮ ಸಂಸಾರಿಯಾಗುತ್ತಾನೆ. ಅಂತಹವನು ಹೊಳಪಿನಿಂದ

ಕೂಡಿರುತ್ತಾನೆ. ಆಗ ತಪಸ್ಸಿಗಾಗಿ ಮತ್ತು ನಿರಂತರ ಪರಿಶ್ರಮಕ್ಕಾಗಿ ಅವನಿಗೆ, ಮೂರನೇ ಆಶ್ರಮ ಇರುತ್ತದೆ. ಯಾವಾಗ ದೀರ್ಘ ತಪಸ್ಸಿನಿಂದ ತಪಸ್ವಿಯು, ಸ್ಪಟಿಕದ ಹರಳಿನಂತೆ ಸ್ವಚ್ಛವಾಗಿ ಇರಬಲ್ಲನೋ, ಆಗ ನಾಲ್ಕನೆಯ ಆಶ್ರಮ ತಾನಾಗಿಯೇ ಲಭಿಸುತ್ತದೆ. ಆದ್ದರಿಂದ ನಾನು ಆಗಲೇ ಹೇಳಿದಂತೆ ಸನ್ಯಾಸಿಯ ವೇಷದಲ್ಲಿ ಕಾಡುವ ವೇಷಧಾರಿ ಸನ್ಯಾಸಾಶ್ರಮಕ್ಕೆ ಅರ್ಹನಲ್ಲ.

## ಸಮಾಜ ಮತ್ತು ಮನುಷ್ಯನ ಗುರಿ

ಪ್ರಶ್ನೆ. ಸಮಾಜಕ್ಕೆ ತನ್ನ ಕೊಡುಗೆ ಮತ್ತು ಕರ್ತವ್ಯವೂ ಹೇಗಿರಬೇಕು?
ಮಹರ್ಷಿ. ನೀನು ಸಮಾಜದ ಒಂದು ಅಂಗ. ಸಮಾಜ ಒಂದು ದೇಹವಿದ್ದಂತೆ. ಎಲ್ಲರೂ ಅದರ ಅಂಗಗಳಿದ್ದಂತೆ. ಯಾವ ರೀತಿಯಲ್ಲಿ ದೇಹದ ಎಲ್ಲ ಅಂಗಾಂಗಗಳು, ತಮ್ಮತಮ್ಮ ಕೆಲಸದಲ್ಲಿ, ಪರಸ್ಪರ ಹೊಂದಾಣಿಕೆಯಲ್ಲಿ ಕಾರ್ಯಮಾಡಿ, ತೃಪ್ತಿಯಾಗಿ ಇರಬಲ್ಲದೋ, ಅದೇರೀತಿ ಕಾಯ ವಾಚಾ ಮನಸಾ ಎಲ್ಲರೂ ಸಹಕರಿಸಿದಾಗ, ಉತ್ತಮ ಸಮಾಜವು ಏರ್ಪಡುತ್ತದೆ. ಅವರವರ ಪಂಗಡಗಳಲ್ಲಿ ಒಳ್ಳೆಯದನ್ನು ಮಾಡುತ್ತಾ, ಮತ್ತೆಲ್ಲಾ ಪಂಗಡಗಳಿಗೆ ಸಹಕಾರಿಯಾಗಿ ಇರಬೇಕು.

ಪ್ರಶ್ನೆ. ಇದಕ್ಕಾಗಿ ಕೆಲವರು ಶಾಂತಿಯನ್ನೂ ಕೆಲವರು ಶಕ್ತಿಯನ್ನೂ ಹೇಳುತ್ತಾರಲ್ಲ. ಇದರಲ್ಲಿ ಸಮಾಜಕ್ಕೆ ಯಾವುದು ಒಳ್ಳೆಯದು?

ಮಹರ್ಷಿ. ವೈಯುಕ್ತಿಕ ಜೀವನದಲ್ಲಿ, ಶಾಂತಿ ಬಹಳ ಮುಖ್ಯ. ಸಮಾಜವನ್ನು ಚೆನ್ನಾಗಿಡಲು ಶಕ್ತಿ ಮುಖ್ಯ. ಶಕ್ತಿಯಿಂದ

ಸಮಾಜವನ್ನು ಕಟ್ಟಿ ಶಾಂತಿಯಿಂದ ಅದನ್ನು ಕಾಪಾಡಬೇಕು. ಎಲ್ಲರಲ್ಲಿಯೂ ಪರಸ್ಪರ ಆದರಗಳಿಂದ ನಡೆದುಕೊಂಡಾಗ, ಶಾಂತಿಯು ತಾನಾಗಿಯೇ ಒದಗಬಲ್ಲದು. ಆತ್ಮಜ್ಞಾನವನ್ನು ಪಡೆದಾಗ, ಅದು ಸಮಾಜಕ್ಕೆ ಬಹಳ ಒಳ್ಳೆಯ ದಾರಿ ತೋರಬಹುದು.

## ಜ್ಞಾನಿಯ ಸಮತ್ವ ದೃಷ್ಟಿ

ಪ್ರಶ್ನೆ. ಜ್ಞಾನಿಯಾಗಿದ್ದರೂ, ಸಮಾಜದ ಕಾರ್ಯಗಳಲ್ಲಿ ನಿರತನಾಗಬಹುದು ಎಂದು ಹೇಳಿದ್ದೀರಿ. ಅದರ ಬಗ್ಗೆ ನನಗೆ ಯಾವ ಸಂದೇಹವೂ ಇಲ್ಲ. ಆದರೆ ಜ್ಞಾನಿಗೆ, ಇದರಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ. ಏಕೆಂದರೆ ಅವನು ಯಾವಾಗಲೂ ಆತ್ಮನಲ್ಲಿ ನೆಲೆ ನಿಂತಿರುತ್ತಾನೆ ಎನ್ನುತ್ತೀರಲ್ಲ? ಹಾಗಾದರೆ ವಿವಿಧ ಕಾರ್ಯಗಳಲ್ಲಿಯೂ, ಮನುಷ್ಯರಲ್ಲಿಯೂ, ಹೇಗೆ ವರ್ತಿಸುತ್ತಾನೆ?

ಮಹರ್ಷಿ. ಅವನು ಎಲ್ಲಾ ವ್ಯತ್ಯಾಸಗಳನ್ನು ಬರಿಯ ತೋರಿಕೆಗಳಾಗಿ, (ನೋಟದಲ್ಲಿ) ಆತ್ಮನಿಗಿಂತ ಬೇರೆಯಾಗದೆ ಇರುವ, ನಿಜವಾದ ಸತ್ಯದಂತೆ ನೋಡುತ್ತಾನೆ. ಏಕೆಂದರೆ ಅವನು ಅದೇ ಅಲ್ಲವೇ?

ಪ್ರಶ್ನೆ. ಜ್ಞಾನಿಯು ಎಲ್ಲ ವ್ಯತ್ಯಾಸಗಳನ್ನು ಬಹಳ ಚುರುಕಾಗಿ ಎಲ್ಲರಿಗಿಂತ ಮಿಗಿಲಾಗಿ ನೋಡಬಲ್ಲ. ನಮಗೆ ಸಕ್ಕರೆ ಯಾವ ರೀತಿ ಸಿಹಿಯಾಗಿದೆಯೋ, ಅದೇರೀತಿ ಅವನಿಗೂ ಇರುತ್ತದೆ. ಹಾಗಿದ್ದಾಗ, ಇವೆಲ್ಲವೂ ತೋರಿಕೆ ಹೇಗೆ ಆಗುತ್ತದೆ? ಇದು ಅವನ ಜೀವಿತ ಅನುಭವಗಳ ಲ್ಲವೇ?.

ಮಹರ್ಷಿ.   ಆಗಲೇ ನಿನಗೆ ತಿಳಿಸಿದಂತೆ, ಸಮತಾ ದೃಷ್ಟಿಯ ಭಾವವೇ ಜ್ಞಾನಿಯ ಗುರುತು. ಸಮತ್ವ ಎಂದಕೂಡಲೇ ಅದರಲ್ಲಿ ವ್ಯತ್ಯಾಸ ಇರುವುದು ಸ್ವಾಭಾವಿಕ. ಇದೆಲ್ಲದರಲ್ಲಿ ಏಕತ್ವವನ್ನು ಕಾಣುವುದೇ ಜ್ಞಾನಿಯು ಲಕ್ಷಣ. ಇದು, ಅವನ ಅಜ್ಞಾನ ಅಥವಾ ಪ್ರತ್ಯೇಕತೆ ಅಲ್ಲ. ಜ್ಞಾನ ಸಂಪಾದನೆ ಆದಮೇಲೆ,(ಸಿದ್ದಿ) ಈ ವ್ಯತ್ಯಾಸಗಳೆಲ್ಲವೂ, ಔಪಚಾರಿಕವಾಗಿ ಇರುತ್ತದೆ. ಇವು ಯಾವುದೂ ಶಾಶ್ವತ ಅಥವಾ ಗಣನೀಯವಾಗುವುದಿಲ್ಲ. ಈ ಎಲ್ಲ ತೋರಿಕೆಗಳಲ್ಲಿ ಮುಖ್ಯವಾದ ಅಂಶವು ಏನಂದರೆ, ಅದು ಎಲ್ಲಾ ಒಂದೇ ಸತ್ಯ ಮತ್ತು ಸ್ಥಿರ. ಆದನ್ನೇ, ಏಕತ್ವ ಅಥವಾ ಒಂದುಗೂಡುವಿಕೆ ಎನ್ನುವರು.

ರೂಪ ರಸ ಗಂಧಗಳ ಬಗ್ಗೆ ತಿಳಿಸಿದೆಯಲ್ಲಾ? ಅದೆಲ್ಲ ನಿಜ. ಜ್ಞಾನಿಯು ಈ ವ್ಯತ್ಯಾಸವನ್ನು ಗುರ್ತಿಸುತ್ತಾನೆ.  ಆದರೆ, ಎಲ್ಲದರಲ್ಲಿಯೂ ಇರುವ ನಿಜವಾದ ಸತ್ಯತೆಯನ್ನು ಕಂಡುಕೊಳ್ಳುತ್ತಾನೆ. ಆದ್ದರಿಂದ ಅವನಿಗೆ ಯಾವ ಆಯ್ಕೆಗಳೂ ಇರುವುದಿಲ್ಲ.  ಒಂದೇ ಏಕವಾದ, ಸ್ಥಿರವಾದ,ತತ್ವವನ್ನೇ ಎಲ್ಲ ನಡೆ-ನುಡಿಗಳಲ್ಲೂ, ಬಲ್ಲವನಾಗುತ್ತಾನೆ.

## ಶಕ್ತಿ ಮತ್ತು ಶಾಕ್ತ.  ಅವಿಚ್ಛಿನ್ನಶಕ್ತಿ ಮತ್ತು ವಿಕಾರವಿಲ್ಲದ ನೆಲೆ

ಪ್ರಶ್ನೆ.  ನಾನಾತ್ವ ಅಥವಾ ತ್ರಿಪುಟಿ ಎನ್ನುವ, ಜ್ಞಾತ, ಕರ್ತ ಭೋಕ್ತ, ಇವುಗಳು ಬರಿಯ ತೋರಿಕೆ ಆಗಿದ್ದರೆ, ಅದರಲ್ಲಿ ಏಕತ್ವ ಹೇಗೆ ಬರಬಲ್ಲದು? ಅದರ ಹಿಂದೆ ಒಂದು ಸತ್ಯ ಇದೆ ಎನ್ನುತ್ತೀರಿ? ಅದು ಯಾವುದು ಮತ್ತು ಅದು, ಶಕ್ತಿ ಶಾಲಿಯೇ?
ಮಹರ್ಷಿ.  ಅದು ಶಕ್ತಿ ಶಾಲಿಯ ಇರುವಿಕೆ.

ಪ್ರಶ್ನೆ.  ಶಾಸ್ತ್ರಗಳು ಮತ್ತು ನೀವು ತಿಳಿಸುವಂತೆ, ಬ್ರಹ್ಮನ್ ಒಬ್ಬ ಅಚಲ, ಸ್ಥಿರ, ಎನ್ನುತ್ತೀರಿ.  ಈಶ್ವರನು ತನ್ನ ಶಕ್ತಿಯಿಂದ ಚಲನೆಗೆ ದಾರಿ ಮಾಡಿಕೊಟ್ಟು ಅದನ್ನು ದಾಟಿ ಅಚಲನಾಗಿ ಹೇಗೆ ಇರಬಲ್ಲ? ಅವನು ಚಲನನೂ ಅಸ್ಥಿರನೂ ಅಲ್ಲವೇ?

ಮಹರ್ಷಿ. ಇಲ್ಲ. ಇಲ್ಲ. ಅದು ನಿನ್ನ ಮನೋಭಾವದಂತೆ ಇರುತ್ತದೆ.  ಇರುವುದು ಒಂದೇ ಸತ್. ಚಲನೆಯನ್ನು ನೋಡಿದಾಗ, ಅದನ್ನು ಶಕ್ತಿ ಎನ್ನುತ್ತೇವೆ. ಆ ಶಕ್ತಿಯನ್ನು ಆಧಾರವಾಗಿ ಇಟ್ಟುಕೊಳ್ಳಬಲ್ಲ "ಸತ್" ಒಂದೇ.  ಇದನ್ನೇ ಆಶ್ರಯ ಎಂದು ಒಬ್ಬರು ಹೇಳಿದರೆ, ಮತ್ತೊಬ್ಬರು ಅಚಲ ಎನ್ನುತ್ತಾರೆ. ಮೊದಲನೆಯದು, ಚಟುವಟಿಕೆ ಅಥವಾ ವ್ಯಾಪಾರವಾದರೆ, ಎರಡನೆಯದು ಅದರ ಆಧಾರಸ್ತಂಭ.  ಅಚಲ ಸ್ಥಿತಿ.

ಶಕ್ತಿ--ವಸ್ತು ಮತ್ತು ಜಡ--ಚೇತನ, ಇವೆರಡೂ ಬೇರ್ಪಡದ ಒಂದೇ ಸ್ಥಿತಿ.  ಇದು ಒಂದೇ "ಸತ್" ನ ಎರಡು ಮುಖಗಳು. ಒಂದು ಇಲ್ಲದೆ ಮತ್ತೊಂದು ಇರಲಾರದು. ಒಂದೇ ನಾಣ್ಯ. ಅದಕ್ಕೆ ಎರಡು ಮುಖ ಇಲ್ಲವೇ

ಪ್ರಶ್ನೆ.  ಶಕ್ತಿಯ  ನಿಜವಾದ ಪಾತ್ರ ಯಾವುದು?

ಮಹರ್ಷಿ.  ಇದು ಈಶ್ವರನ, ಎಂದೆಂದಿಗೂ ಸ್ಥಿರವಾದ ನೆಲೆಗೆ ಸಮಾನಾಂತರವಾಗಿ ಇರುವುದು. ಈ ಸ್ಥಿರವಾದ ಈಶ್ವರನ ಲೀಲೆಯೇ, ಎಲ್ಲ ವಿವಿಧ ಪ್ರಪಂಚಗಳಿಗೆ, ಉತ್ಪತ್ತಿ ಸ್ಥಾನವಾಗಿದೆ.

ಪ್ರಶ್ನೆ. ಪ್ರಪಂಚಗಳು ಸೃಷ್ಟಿಯಾಗಿ, ನಾಶವಾಗುತ್ತಿದೆಯಲ್ಲಾ? ಹೇಗೆ ಅದು ಶಾಶ್ವತ ಎನ್ನುತ್ತೀರಿ?

ಮಹರ್ಷಿ.  ಎಲ್ಲ ರೀತಿಯ ಚಟುವಟಿಕೆಗಳೂ, ಸಂಪೂರ್ಣವಾಗಿ ಸ್ಥಗಿತಗೊಂಡರೂ, ಅದು ಸುಪ್ತ ಅವಸ್ಥೆಯಲ್ಲಿ ಇರುತ್ತದೆ. ಎಂದರೆ, ಶಕ್ತಿಯು ಎಂದೂ ನಾಶವಾಗುವದಿಲ್ಲ.

ಪ್ರಶ್ನೆ. ಹಾಗಾದರೆ, ಈ ಚಲನೆ ಯಾವುದು?
ಮಹರ್ಷಿ. ಪ್ರತಿಯೊಂದು ಚಲನೆಯಲ್ಲಿಯೂ ಸೃಷ್ಟಿಯಾಗುತ್ತದೆ ಮತ್ತು ಪ್ರತಿಯೊಂದು ಕ್ಷಣದಲ್ಲಿಯೂ ನಷ್ಟ ಹೊಂದುತ್ತದೆ. ಪರಿಪೂರ್ಣ ಸೃಷ್ಟಿ ಮತ್ತು ನಾಶ ಎಂಬುದು ಇಲ್ಲವೇ ಇಲ್ಲ. ಎರಡೂ ಚಲನೆಯೇ ಮತ್ತು ಅದು ಒಂದು ಶಾಶ್ವತ ನೆಲೆ ಕೂಡ.
ಪ್ರಶ್ನೆ. ಹಾಗಿದ್ದಲ್ಲಿ ಶಕ್ತಿ ಮತ್ತು ವಸ್ತು, ವ್ಯಾಪಾರ ಮತ್ತು ಆಶ್ರಯ ಇವೆರಡೂ "ಸತ್" ನಲ್ಲಿನ ಎರಡು ಮುಖಗಳು ಎಂದು ಪರಿಗಣಿಸುತ್ತೇನೆ.
ಮಹರ್ಷಿ. ಹೌದು ಅದು ಸರಿ. ಆದರೆ, ಈ ಎಲ್ಲಾ ಚಲನೆ ಮತ್ತು ಈ ಸೃಷ್ಟಿ, ಶಕ್ತಿಯ ಒಂದು ಆಟವಷ್ಟೇ. ಇದನ್ನೇ ಈಶ್ವರ ಕಲ್ಪನಾ ಎನ್ನುತ್ತಾರೆ. ಈ ಕಲ್ಪನೆಯನ್ನು ದಾಟಿದಾಗ ಕಂಡುಬರುವುದೇ ಸ್ವರೂಪ.

………..ಶುಭಂ………...

ರಮಣ ಗೀತಾ

ಮೂಲ .ಗಣಪತಿ ಮುನಿ

ಕನ್ನಡ ಅನುವಾದ

ರಾಧ್ಯಾಕೃಷ್ಣನ್ ಗರಣಿ

ವೈಶಾಖ ಶುದ್ಧ ಪೂರ್ಣಿಮ

೨೮.೦೫.೨೦೨೧

ಈ ಪುಸ್ತಕವು ವ್ಯಾಸಂಗಕ್ಕೆ ಮಾತ್ರ ಸಿದ್ಧಪಡಿಸಿದೆ. ಯಾವ ವ್ಯಾಪಾರಕ್ಕೆ ಅಲ್ಲ. ಇದು ಅಂತಿರಕ ಉಪಯೋಗಕ್ಕೆ ಸೀಮಿತ



ವಶಿಷ್ಠ. ಗಣಪತಿ ಮುನಿ

# ವಿಷಯ ಸೂಚಿ

ರಮಣ ಗೀತಾ,ಹದಿನೆಂಟು ಅಧ್ಯಾಯಗಳ ಕಾವ್ಯಕಂಠ ಗಣಪತಿ ಮುನಿಗಳ ಅಮೋಘವಾದ ಕೃತಿ. ಮುನಿಗಳ ಆಪ್ತ ಶಿಷ್ಯರುಗಳು ಮತ್ತು ಅವರ ನಿಕಟವರ್ತಿಗಳಿಂದ ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುತ್ತಾ ಶ್ರೀರಮಣ ಮಹರ್ಷಿಗಳಿಂದ ಪಡೆದ ಉತ್ತಮ ಸಂದೇಶಗಳು.

೧೯೧೩ ರಿಂದ ೧೯೧೭ ರವರೆಗೆ ರಮಣರು, ಅರುಣಾಚಲ ಬೆಟ್ಟದ ವಿರೂಪಾಕ್ಷ ಗುಹೆಯಲ್ಲಿ ಏಕಾಂತದಲ್ಲಿ ಇದ್ದಾಗ, ಬೇರೆ ಬೇರೆ ಸಂಧರ್ಭಗಳಲ್ಲಿ,, ಬೇರೆ ಬೇರೆ ಭಕ್ತರ ಸಮೂಹದಲ್ಲಿ, ಅವರ ಪ್ರಶ್ನೆಗಳಿಗೆ ಕರುಣಿಸಿದ, ಸಂದೇಶಗಳು. ಇವು, ಬ್ರಹ್ಮಸೂತ್ರದ ಸಾರದಂತೆ, ಸಣ್ಣ ಸಣ್ಣ ಉಪದೇಶಗಳು. ಇದರಿಂದ, ಜ್ಞಾನ ಭಕ್ತಿ ಕರ್ಮ ಮತ್ತು ರಾಜಯೋಗಗಳು ಬೆಳಕಿಗೆ ಬರುತ್ತವೆ.

ಅತ್ಯಂತ ಮೃದು ಸ್ವಭಾವದವರೂ ಮತ್ತು ಮಿತಭಾಷಿಗಳೂ ಆದ ಮಹರ್ಷಿಗಳು, ಅವರ ಕೋರಿಕೆಗಳಿಗೆ ಸೂಕ್ತ ವಿವರಣೆ ಯನ್ನು ಕರುಣಿಸಿದರು. ಇದನ್ನು ಹದಿನೆಂಟು ಅಧ್ಯಾಯಗಳಾಗಿ ವಿಂಗಡಿಸಿ ಸಂಸ್ಕೃತ ಭಾಷೆಯಲ್ಲಿ ರಚಿಸಿದ ಮಹಾನ್ ವ್ಯಕ್ತಿಯೇ ಕಾವ್ಯಕಂಠ ಗಣಪತಿ ಮುನಿಗಳು.

ಈಶ್ವರನ ಅವತಾರವೆಂದೇ ಪ್ರಸಿದ್ಧರಾದ ಮತ್ತು ಪರಾಶರ ವಂಶದಲ್ಲಿ ಜನಿಸಿದ ರಮಣ ಮಹರ್ಷಿಗಳ ನಿರೂಪಣೆ, ಸ್ವಯಂ ಈಶ್ವರನಿಂದಲೇ ಬಂದಂತಹ ಮುತ್ತುರತ್ನಗಳು. ಬಹಳಷ್ಟು ತೊಡಕಾದ, ಉತ್ತರಿಸಲು ಆಗದಂತಹ ಪ್ರಶ್ನೆಗಳಿಗೆ ಸೂಕ್ತ ಸಲಹೆಯಿಂದ ಗೊಂದಲವನ್ನು ನಿವಾರಣೆ ಮಾಡಿದ ಮಹಾನ್ ವ್ಯಕ್ತಿ, ಶ್ರೀ ರಮಣರು.

ಮುಮುಕ್ಷುಗಳಲ್ಲಿ ಇಂತಹ ಅನೇಕ ಸಂಶಯಗಳು ತೋರಿಕೊಂಡು ಸಾಧನೆಯ ಪಥದಲ್ಲಿ ತೊಡಕು ಉಂಟಾದಾಗ, ರಮಣರ ನುಡಿಗಳು ಅವುಗಳನ್ನು ನಿವಾರಿಸಲು ಸಹಕಾರಿಯಾಗುತ್ತದೆ.

ಅತ್ಯಂತ ಗಹನ ಮತ್ತು ಸ್ಥಿರವಾದ ಸಲಹೆ ಮತ್ತು ಸಂಶಯ ರಹಿತವಾದ ರಮಣ ಮಹರ್ಷಿಗಳ ನುಡಿಗಳು ಬಹಳ ಉಪಕಾರಿ. ಕಾವ್ಯಕಂಠಮುನಿಗಳ ಈ ಪ್ರಯತ್ನದಿಂದ ಎಲ್ಲರ ಸಾಧನೆ ಸುಗಮವಾಗಿ ನೆರವಾಗಲಿ ಎಂದು ಪ್ರಾರ್ಥಿಸಿ ಅವರಿಗೆ ನಮ್ಮ ನಮನಗಳನ್ನು ಅರ್ಪಿಸೋಣ.

ಬರಹವನ್ನು ಬಹಳ ಸುಲಭವಾಗಿ ತಿಳಿಸುವ ಸಲುವಾಗಿ ಶಿಷ್ಯರ ಹೆಸರುಗಳು ಮತ್ತು ಮಿಕ್ಕ ವಿವರಗಳನ್ನು ಬದಿಗಿಟ್ಟು(ಅನುಬಂಧ 2) ಶಿಷ್ಯನ ಪ್ರಶ್ನೆ ಮತ್ತು ಮಹರ್ಷಿಗಳ ಉತ್ತರವನ್ನು ಮಾತ್ರ ತೆಗೆದುಕೊಂಡು ತಿರುಳನ್ನು ತಲುಪಿಸುವ ಸಾಹಸವನ್ನು ಮಾಡಿದ್ದೇನೆ. ಎಲ್ಲರಿಗೂ ಇದು ಒಪ್ಪಿಗೆ ಎಂದು ನಂಬಿದ್ದೇನೆ. ನನ್ನ ಸ್ನೇಹಿತರ ಸಹಕಾರ ಮತ್ತು ಪ್ರಚೋದನೆ,ಮತ್ತು ಈ ಮಹಾನ್ ಕಾರ್ಯವನ್ನು ಸುಲಭವಾಗಿಸಿದ ಶ್ರೀರಮಣರ ಆಶೀರ್ವಾದಗಳು ನನಗೆ ಸದಾ ಇರಲಿ ಎಂಬ ಆಶಯದಿಂದ ನಾಲ್ಕು ಮಾತು ಗಳನ್ನು ಈ ಪ್ರಸ್ತಾವನೆಯಲ್ಲಿ ತಿಳಿಸುತ್ತಿದ್ದೇನೆ.

ಓಂ ಶಾಂತಿಃ ಶಾಂತಿಃ ಶಾಂತಿಃ

## ಉಪಾಸನೆಯ ಮಹತ್ವ.

**ಪ್ರಶ್ನೆ**. ನಿಜ ಮತ್ತು ತೋರಿಕೆಗೆ ವ್ಯತ್ಯಾಸ ಅಥವಾ ತಾರತಮ್ಯ ತಿಳಿದಕೂಡಲೇ ಮುಕ್ತಿ ದೊರೆಯಬಲ್ಲದೇ? ಅಥವಾ ಬಂಧನದಿಂದ ಬಿಡುಗಡೆಗೆ ಬೇರೆ ಏನಾದರೂ ಉಪಾಯವಿದೆಯೇ?

**ಮಹರ್ಷಿಗಳು**. ಆತ್ಮ ನೆಲೆಯಲ್ಲಿ ನಿಂತಿರುವುದೇ ಎಲ್ಲ ರೀತಿಯ ಬಂಧನಗಳಿಗೆ ಮುಕ್ತಿ. ನಿಜ ಮತ್ತು ತೋರಿಕೆಗಳ ತಾರತಮ್ಯ ತಿಳಿದಕೂಡಲೇ ಬರಿಯ ಬಾಂಧವ್ಯದಿಂದ ಮುಕ್ತವಾಗುವನೇ ಹೊರತು ಮತ್ತೆ ಏನೂ ಆಗುವುದಿಲ್ಲ.
ಜ್ಞಾನಿಯನ್ನು ಅಳೆಯಲಾಗುವುದಿಲ್ಲ, ಅಳೆಯಲಾಗಲಾರದು. ಅವನು ಎಂದೆಂದಿಗೂ ಆತ್ಮನಲ್ಲಿ ನೆಲೆ ನಿಂತಿರುವವ. ಈ ಬ್ರಹ್ಮಾಂಡವು ತನ್ನಿಂದ ಬೇರೆ ಅಲ್ಲ ಮತ್ತು ತೋರಿಕೆಯು ಅಲ್ಲ ಎಂದು ಖಚಿತವಾಗಿ ತಿಳಿದಿರುತ್ತಾನೆ.

**ಪ್ರಶ್ನೆ**. ಶಾಸ್ತ್ರಗಳ ಓದುವಿಕೆಯಿಂದ ಮುಕ್ತಿ ದೊರೆಯಬಲ್ಲದೋ ಅಥವಾ ಗುರುಗಳ ಮಾರ್ಗದರ್ಶನ ಇದಕ್ಕೆ ಬೇಕೋ?
**ಮಹರ್ಷಿಗಳು**. ಬರಿಯ ಶಾಸ್ತ್ರಗಳಿಂದ ಮತ್ತು ಅವುಗಳ ಓದುವಿಕೆಯಿಂದ ಯಾರೂ ತನ್ನ ಜ್ಞಾನದ ಮೂಲವನ್ನು ಅರಿಯಲಾರರು. ಉಪಾಸನೆಯಲ್ಲಿ ತೊಡಗಿದ್ದರೆ ಮಾತ್ರ ಸಾಧನೆಯಲ್ಲಿ ಜಯಗಳಿಸ ಬಹುದು. ಇದು ಖಂಡಿತ.

ಆಧ್ಯಾತ್ಮಿಕ ಸಾಧನೆಯಲ್ಲಿ ತನ್ನ ನೈಸರ್ಗಿಕ ನೆಲೆಯನ್ನು ಅನುಭವಕ್ಕೆ ತಂದುಕೊಳ್ಳುವುದಕ್ಕೆ ಉಪಾಸನೆ ಎನ್ನುತ್ತಾರೆ. ಆ ನೆಲೆ ಎಂದು ಸ್ಥಿರವಾಗಿ ಶಾಶ್ವತವಾಗಿ ನಿಲ್ಲುವುದೊ, ಅದನ್ನೇ ಜ್ಞಾನ ಎನ್ನುತ್ತಾರೆ. ಇಂದ್ರಿಯಗಳಿಂದ ಬಂದಂತಹ ವಿಷಯಗಳನ್ನು ಗ್ರಹಿಸದೆ (ಅವೆಲ್ಲವನ್ನೂ ನಿರಾಕರಿಸಿ) ತನ್ನ ನಿಜ ಸ್ವರೂಪದಲ್ಲಿ ಜ್ಞಾನದ ಜ್ವಾಲೆಯಲ್ಲಿ ನೆಲೆಸಿರುವುದಕ್ಕೆ ಸಹಜ ಸ್ಥಿತಿ ಎನ್ನುತ್ತಾರೆ.

**ಪ್ರಶ್ನೆ**. ಸ್ಥಿತಪ್ರಜ್ಞನು ತನ್ನ ನೆಲೆಯನ್ನು ಯಾವ ವಿಧದಿಂದ ಗುರುತಿಸಿಕೊಳ್ಳುತ್ತಾನೆ? ಪೂರ್ಣ ಜ್ಞಾನದ ಅನುಭವದಿಂದಲೋ ಅಥವಾ ಹೊರಗಿನ ಪ್ರಪಂಚದ ಅರಿವು ಇಲ್ಲದಿದ್ದಾಗಲೋ?
**ಮಹರ್ಷಿಗಳು**. ವಾಸನೆಗಳಿಂದ ಮುಕ್ತನಾಗಿ ಸ್ಥಿರವಾದ ನೈಜ ಸ್ಥಿತಿಯಲ್ಲಿ ಪರಮ ಶಾಂತಿಯಲ್ಲಿ ಇದ್ದಾಗ, ಜ್ಞಾನಿಯ ತನ್ನನ್ನು ತಾನು ಯಾವ ಸಂಶಯವೂ ಇಲ್ಲದೆ ನೋಡಬಲ್ಲವನಾಗಿರುತ್ತಾನೆ.

**ಪ್ರಶ್ನೆ**. ಜ್ಞಾನಿಯನ್ನು, ತಿಳಿದವರು ಯಾವ ರೀತಿ ಗುರುತಿಸುತ್ತಾರೆ?
**ಮಹರ್ಷಿಗಳು**. ಎಲ್ಲ ಜೀವಿಗಳಲ್ಲಿಯೂ ಸಮ ಭಾವನೆಯಿಂದ ಕೂಡಿರುವವನು, ತನ್ನ ಜ್ಞಾನದಲ್ಲೇ ಬೀಡುಬಿಟ್ಟಿದ್ದಾನೆ, ಎಂಬುದೇ ತಾತ್ಪರ್ಯ.

**ಪ್ರಶ್ನೆ**. ಸಮಾಧಿಯ ಅಭ್ಯಾಸದಿಂದ ನಮಗೆ ಬರಿಯ ಜ್ಞಾನವು ದೊರಕುವುದೋ ಅಥವಾ ಇಷ್ಟಾರ್ಥಗಳು ಸಿದ್ಧಿಯಾಗುತ್ತವೆಯೋ?
**ಮಹರ್ಷಿಗಳು**. ಯಾವ ಉದ್ದೇಶದಿಂದ ಸಮಾಧಿ ಅಭ್ಯಾಸ ಮಾಡುವರೋ, ಆ ಉದ್ದೇಶ ಖಂಡಿತವಾಗಿಯೂ ಫಲ ಕೊಡುತ್ತದೆ.

**ಪ್ರಶ್ನೆ**. ಇಷ್ಟಾರ್ಥಗಳಿಗಾಗಿ ಯೋಗಸಾಧನೆಯಲ್ಲಿ ತೊಡಗಿಸಿಕೊಂಡವನು, ಬರಿಯ ಸ್ಥಿತಪ್ರಜ್ಞೆಯನ್ನು ಹೊಂದುವನೋ ಅಥವಾ ಅವನ ಅಭೀಷ್ಟಗಳು ಕೂಡ ನೆರವೇರುವುದೋ.

**ಮಹರ್ಷಿಗಳು**. ಆಸೆಗಳಿಂದ ಕೂಡಿದ ಯೋಗಾಭ್ಯಾಸದಿಂದ ಸ್ಥಿತಪ್ರಜ್ಞ ಎನಿಸಿ ಕೊಂಡವನಿಗೆ, ಆಸೆಗಳು ತೀರಿದರೂ ಶಾಶ್ವತವಾದ ಸಂತೋಷದ ಸ್ಥಿತಿ ಇರುವುದಿಲ್ಲ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಉಪಾಸನೆಯ ಮಹತ್ವ ಎಂಬ ಮೊದಲನೆಯ ಅಧ್ಯಾಯ.

ಎರಡನೆಯ ಅಧ್ಯಾಯ.

## ಮೂರು ಪಥಗಳು.

೧೯೧೫ ನೆಯ ಚಾತುರ್ಮಾಸದಲ್ಲಿ ರಮಣ ಮಹರ್ಷಿಗಳಿಂದ ಹೊರ ಹೊಮ್ಮಿದ ಈ ವಾಣಿ, ಅವರ ಉಪದೇಶದ ಸಾರ ಸಂಗ್ರಹ.

ನಾನು ನಾನು ಎಂದು ಘೋಷಿಸುತ್ತಿರುವ ಬ್ರಹ್ಮನ್ ಒಬ್ಬನೇ, ನಮ್ಮೆಲ್ಲರ ಹೃದಯದ ಅಂತರಾಳದಲ್ಲಿ ಬೆಳಗುತ್ತಿರುವವನು. ಮನಸ್ಸಿನಿಂದ ಅನ್ವೇಷಣೆ ಮಾಡುತ್ತಲೋ ಅಥವಾ ಹೃದಯದ ತಳಕ್ಕೆ ಮುಳುಗಿಯೋ ಅಥವಾ ವಾಯು ರೋಧನದಿನ್ದಲೋ ಹೃದಯದಲ್ಲಿ ನೆಲೆಸಿರುವ ಆತ್ಮನಲ್ಲಿ ಲೀನನಾಗು.

ವೇದಾಂತದ ಮೂಲ ಮಂತ್ರವಾದ ಈ ರಮಣ ಮಹರ್ಷಿಗಳ ವಾಣಿಯನ್ನು ಯಾರು ತಿಳಿಯ ಬಲ್ಲರೋ, ಅವರಿಗೆ ಎಂದೂ ಅನುಮಾನವು ಬರುವುದೇ ಇಲ್ಲ.

ಪಂಚಭೂತಾತ್ಮಕವಾದ ಈ ದೇಹದಲ್ಲಿ ಆತ್ಮನ ವಾಸಸ್ಥಾನವನ್ನು ಮಹರ್ಷಿಗಳು ತಮ್ಮ ಮೊದಲನೆಯ ಚರಣದಲ್ಲಿ ನಿಖರವಾಗಿ ತಿಳಿಸಿದ್ದಾರೆ. ಅಲ್ಲಿಯೇ, ಆತ್ಮನ ಕುರಿತು ಪರಿಚಯ ಸಮರ್ಥಿಸಿಕೊಂಡಿದೆ. ವಿವಿಧ ರೀತಿಯ ವಿವರಣೆಗಳಿಂದ ತಿಳಿದಿರುವಂತಹ ದೇವರು ಎಂಬವನು ಬ್ರಹ್ಮನಿಂದ ಬೇರೆ ಅಲ್ಲ ಎಂದು ಖಚಿತ ಪಡಿಸಲಾಗಿದೆ.

ಎರಡನೆಯ ಚರಣದಲ್ಲಿ ಮೂರು ವಿಧವಾದ ಮಾರ್ಗಗಳಲ್ಲಿ ಶಿಷ್ಯನು ತೊಡಗಬೇಕಾದ ಆದೇಶಗಳನ್ನು ತಿಳಿಸಿದ್ದರೂ, ಅವೆಲ್ಲವೂ ಮೂಲಭೂತವಾಗಿ ಒಂದೇ ಆಗಿದೆ.

ಮೊದಲನೆಯ ಪಥಕ್ಕೆ ಮಾರ್ಗಣ ಎಂದು ಹೆಸರು. ಎರಡನೆಯದು ಮಜ್ಜನ ಮತ್ತು ಮೂರನೆಯದು ಪ್ರಾಣರೋಧ, ಅಂದರೆ, ಉಸಿರಾಟದ ನಿಯಂತ್ರಣ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ ಮೂರು ಪಥಗಳು ಎಂಬ ಎರಡನೆಯ ಅಧ್ಯಾಯ.

ಮೂರನೆಯ ಅದ್ಯಾಯ

# ಪ್ರಮುಖ ಕರ್ತವ್ಯಗಳು

**ಪ್ರಶ್ನೆ**.. ಸಂಸಾರದಲ್ಲಿ ಮನುಷ್ಯನಿಗೆ ಪ್ರಮುಖವಾದ ಕಾರ್ಯ ಅಥವಾ ಕರ್ತವ್ಯ ಯಾವುದು?

**ಮಹರ್ಷಿಗಳು**. ಮಹತ್ವಾಕಾಂಕ್ಷೆ ಇರುವ ಮನುಷ್ಯ, ತನ್ನ ನಿಜಸ್ವರೂಪವನ್ನು ಕಂಡುಕೊಂಡಾಗ ಅದೇ ಎಲ್ಲವೂ ಕರ್ತವ್ಯವಾಗುತ್ತದೆ. ಕರ್ತವ್ಯದ ಫಲಕ್ಕೆ ಇರುವ ಮೂಲ ಅಂಶ ಇದೇ.

**ಪ್ರಶ್ನೆ**. ತನ್ನ ನಿಜಸ್ವರೂಪವನ್ನು ಯಾವ ರೀತಿಯಲ್ಲಿ ತಿಳಿಯಬಹುದು? ಇದಕ್ಕಾಗಿ ಯಾವ ರೀತಿಯ ಪ್ರಯತ್ನದ ಅವಶ್ಯಕತೆ ಬೇಕು ಮತ್ತು ಭವ್ಯವಾದ ಮಹೋನ್ನತವಾದ ಅಂತರ್ದರ್ಶನಕ್ಕೆ ದಾರಿ ಯಾವುದು?

**ಮಹರ್ಷಿಗಳು**. ಕಷ್ಟಪಟ್ಟು ಎಲ್ಲ ಇಂದ್ರಿಯಗಳ ಯೋಚನೆಗಳಿಂದ ದೂರಸರಿದು, ಉದ್ದೇಶ ರಹಿತ ಚಿಂತನೆಯಲ್ಲಿ ಮತ್ತು ಆತ್ಮನ ಚಿಂತನೆಯಲ್ಲಿ ಸ್ಥಿರವಾಗಿ ನಿಲ್ಲಬೇಕು. ಬಹಳ ಸೂಕ್ಷ್ಮವಾಗಿ ಹೇಳಬೇಕಾದರೆ, ನಿಜಸ್ವರೂಪವನ್ನು ತಿಳಿಯಲು ಇದು ಒಂದೇ ದಾರಿ. ಈ ಸ್ವ ಪ್ರಯತ್ನದಿಂದಲೇ ಅಂತರಾತ್ಮದ ಬಗ್ಗೆ,ತಿಳಿಯಲು ಸಾಧ್ಯ.

**ಪ್ರಶ್ನೆ**.. ಯೋಗದಿಂದ ಸಫಲವಾದ ದಾರಿ ಸಿಗುವವರೆಗೂ ನಿಯಮಗಳು, ಅಧ್ಯಾತ್ಮ ಸಾಧನೆ ಸಹಾಯವಾಗಬಲ್ಲದೇ.

**ಮಹರ್ಷಿಗಳು**. ನಿಯಮಗಳು ಸಾಧಕರಲ್ಲಿ ಖಂಡಿತವಾಗಿಯೂ ಸಹಾಯಕ್ಕೆ ಬರಬಹುದು. ಇವುಗಳು ಯಶಸ್ಸು ಅಥವಾ ಜಯಗಳಿಸಿದಾಗ ತನ್ನಷ್ಟಕ್ಕೆ ತಾನೇ ಬಿದ್ದು ಹೋಗುತ್ತದೆ. ನಂತರ ಮಾಡಬೇಕಾದದ್ದು ಏನೂ ಇರುವುದಿಲ್ಲ.

**ಪ್ರಶ್ನೆ**. ಉದ್ದೇಶ ರಹಿತ ಚಿಂತನೆಗಳ ವಿಚಾರಣೆಗಳಿಂದ ದೂರ ಸರಿದಾಗ, ಸಿಗುವ ಆನಂದ ಅಥವಾ ಪರಿಣಾಮ, ಮಂತ್ರಗಳ ಉಚ್ಚಾರಣೆಯಿಂದ ಲಭ್ಯವಾಗ ಬಲ್ಲದೇ.

**ಮಹರ್ಷಿಗಳು**. ಶ್ರದ್ಧಾವಂತ ಸಾಧಕರು ನಿರಂತರವಾಗಿ ಮತ್ತು ಸ್ಥಿರವಾಗಿ ಮನಸ್ಸನ್ನು ನಿಲ್ಲಿಸಿಕೊಂಡು ಮಂತ್ರ ಜಪ ಅಥವಾ ಪ್ರಣವ ಜಪ ಮಾಡಿದರೆ ಯಶಸ್ಸು ದೊರಕಬಲ್ಲದು. ಮಂತ್ರದ ಉಚ್ಚಾರಣೆ ಅಥವಾ ಪ್ರಣವ ಜಪದಿಂದಲೇ ಮನಸ್ಸನ್ನು ಬಾಹ್ಯ ಕರಣಗಳಿಂದ ಕಳೆದುಕೊಳ್ಳಲು ಸಾಧ್ಯ ಮತ್ತು ಅಂತಹವನಿಗೆ ತನ್ನ ನಿಜಸ್ವರೂಪದಲ್ಲಿ ಅದರ ನೆಲೆಯಲ್ಲಿ ತನ್ನನ್ನು ನಿಲ್ಲಿಸಿಕೊಳ್ಳುವವನು, ಆಗುತ್ತಾನೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ ಪ್ರಮುಖ ಕರ್ತವ್ಯ ಎಂಬ ಮೂರನೆಯ ಅಧ್ಯಾಯ.

ನಾಲ್ಕನೆಯ ಅಧ್ಯಾಯ.
ಜ್ಞಾನದ ಪ್ರಕೃತಿ ಮತ್ತು ಸ್ವಭಾವ.

**ಪ್ರಶ್ನೆ**. ಜ್ಞಾನ ಎಂದರೇನು? "ನಾನು ಬ್ರಹ್ಮನ್" ಎನ್ನುವ ವೃತ್ತಿಯೋ ಅಥವಾ 'ಬ್ರಹ್ಮನೇ ನಾನು" ಎನ್ನುವ ವೃತ್ತಿಯೋ ಅಥವಾ "ನಾನೇ ಎಲ್ಲಾ" ಎನ್ನುವ ವೃತ್ತಿಯೋ? ಅಥವಾ "ಇದೆಲ್ಲವೂ ಬ್ರಹ್ಮವೇ" ಎಂಬ ವೃತ್ತಿಯೋ? ಜ್ಞಾನ ಎಂಬುವುದು ಈ ನಾಲ್ಕರಿಂದ ಬೇರೆ ಯಾದುದು ಇದೆಯೇ?

**ಮಹರ್ಷಿಗಳು**. ಈ ಎಲ್ಲ ವೃತ್ತಿಗಳು, ಮನಸ್ಸಿನ ಪರಿಕಲ್ಪನೆಗಳೇ ಹೊರತು ಬೇರೆ ಏನೂ ಅಲ್ಲ ಎಂಬುದರಲ್ಲಿ ಸಂಶಯವೇ ಇಲ್ಲ. ಶುದ್ಧ ಆತ್ಮನಲ್ಲಿ ನೆಲೆ ನಿಲ್ಲುವುದು 'ಜ್ಞಾನ,' ಎಂದು ತಿಳಿದವರು ಹೇಳುತ್ತಾರೆ.

**ಪ್ರಶ್ನೆ**. ಹಾಗಾದರೆ ವೃತ್ತಿಗಳನ್ನು ಆಧರಿಸಿ, ಬ್ರಹ್ಮನನ್ನು ತಿಳಿಯಬಹುದೇ?

**ಮಹರ್ಷಿಗಳು**. ವೃತ್ತಿಗಳನ್ನು ಆಧರಿಸಿ ನನ್ನ ನಿಜ ಸ್ವರೂಪವೇ ಆದ ಬ್ರಹ್ಮನನ್ನು ಹುಡುಕತೊಡಗಿದಾಗ, ಅದು ತನ್ನ ಸ್ವ ಸ್ವಸ್ವರೂಪವನ್ನು ತಾಳಿ, ಉಳಿದ ಇರುವಿಕೆಗಳನ್ನು ಕಳೆದು ಕೊಳ್ಳುತ್ತದೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ ಜ್ಞಾನದ ಪ್ರಕೃತಿ ಮತ್ತು ಸ್ವಭಾವ
ಎಂಬ ನಾಲ್ಕನೆಯ ಅಧ್ಯಾಯ.

ಐದನೆಯ ಅಧ್ಯಾಯ.
ಹೃದಯದ ವಿಜ್ಞಾನ.

ಹೃದಯದ ವಿಜ್ಞಾನದ ಬಗ್ಗೆ ಮಹರ್ಷಿಗಳು ವಿಸ್ತಾರವಾಗಿ ವಿವರಣೆಯನ್ನು ಕರುಣಿಸಿದ್ದಾರೆ.

**ಮಹರ್ಷಿಗಳು**. ದೇಹಧಾರಿಯಾದ ಮಾನವನಲ್ಲಿ, ಎಲ್ಲ ರೀತಿಯ ಯೋಚನೆಗಳು ಹೃದಯದಿಂದ ಉದ್ಭವವಾಗುತ್ತದೆ. ಅಂತಹ ಎಲ್ಲ ವಿಷಯಗಳು ಮನಸ್ಸಿನ ಬರಿಯ ಕಲ್ಪನೆಗಳೇ. ಎಲ್ಲ ಯೋಚನೆಗಳ ಮೂಲವೇ **ನಾನು ನಾನು** ಎಂಬ ಚಿಂತನಾಸ್ಥಿತಿ. ಸಂಕ್ಷಿಪ್ತವಾಗಿ ಹೇಳಬೇಕಾದರೆ ಯಾವ ಒಂದು ನೆಲೆಯಿಂದ ಈ 'ನಾನು' ಎಂಬುವುದು ಉದ್ಭವವಾಗುತ್ತದೆಯೋ ಅದಕ್ಕೆ ಹೃದಯ ಎಂದು ಹೆಸರು.

**ಪ್ರಶ್ನೆ**. ಅನಾಹತ ಚಕ್ರದಲ್ಲಿ ಹೃದಯವು ಇರುವುದಾದರೆ ಯೋಗದ ಅಭ್ಯಾಸಗಳು ಮೂಲಾಧಾರ ಚಕ್ರದಿಂದ ಹೇಗೆ ತಾನೆ ಸಾಧ್ಯವಾಗಬಲ್ಲದು?

**ಮಹರ್ಷಿಗಳು**. ನಾನು ತಿಳಿಸುತ್ತಿರುವ ಈ ಹೃದಯ, ರಕ್ತಚಲನೆಯನ್ನು ಮಾಡುತ್ತಿರುವ ಉಪಕರಣವಾದ ಹೃದಯಕ್ಕಿಂತ ಬೇರೆಯದ್ದು. ಹೃದಯಂ ಎನ್ನುವುದು ಹೃತ್ ಎಂಬುವುದರ ಮೂಲ. ಎಂದರೆ ಎಲ್ಲವನ್ನೂ ತನ್ನಲ್ಲಿ ಸೆಳೆದುಕೊಳ್ಳುವ ಕೇಂದ್ರ. ಅಯಂ ಎಂದರೆ ಇದು ಎಂದು. ಆದ್ದರಿಂದ "ಇದು ಆತ್ಮ" ಎಂದು ಆಗುತ್ತದೆ.

ಈ ಹೃದಯವು ಎದೆಯ ಗೂಡಿನ ಬಲಭಾಗದಲ್ಲಿದೆ. ಎಂದೆಂದೂ ಎಡಭಾಗದಲ್ಲಿ ಇಲ್ಲ. ಅರಿವಿನ ಬೆಳಕು, ಹೃದಯದಿಂದ ಹೊರಟು, ಸುಷುಮ್ನ ನಾಡಿಯ ಮೂಲಕ ಸಹಸ್ರಾರವನ್ನು ಸೇರುತ್ತದೆ. ಅಲ್ಲಿಂದ ಪೂರ್ಣ ದೇಹವನ್ನು ಆಕ್ರಮಿಸಿಕೊಂಡ ಕೂಡಲೇ ನಮಗೆ ಈ ಪ್ರಪಂಚದ ಅನುಭವವು ಗೋಚರವಾಗುತ್ತದೆ.

ನಮ್ಮ ಎಲ್ಲಾ ವೀಕ್ಷಣೆಗಳು ಬೆಳಕಿನಿಂದ ಬೇರೆಯೇ ಎಂದು ತಿಳಿದುಕೊಂಡಾಗ ನಾವು ಸಂಸಾರ ಚಕ್ರದಲ್ಲಿ ಸಿಕ್ಕಿಬಿಡುತ್ತೇವೆ. ಆದರೆ. ಆತ್ಮನಲ್ಲಿ ನೆಲೆನಿಂತವನಿಗೆ, ನಾನು ಪರಿಶುದ್ಧ ಪ್ರಜ್ಞೆಯಲ್ಲದೆ ಬೇರೆ ಏನೂ ಅಲ್ಲ, (ಬರಿಯ ಅರಿವಿನ ಇರುವಿಕೆ) ಎಂದು ಖಚಿತವಾಗಿ ತಿಳಿದವನಿಗೆ ಸಹಸ್ರಾರದಲ್ಲಿ ಶುದ್ಧಜ್ಯೋತಿಯೇ ಇರುತ್ತದೆ. ಈ ಜ್ಯೋತಿಯೇ, ಅವನನ್ನು ಸುತ್ತುವರಿದಿರುವುದರಿಂದ, ಅವನಿಗೆ, ಯಾವ ರೀತಿಯಾದ ಗೊಂದಲಗಳು ಇರುವುದಿಲ್ಲ. ನಾನು ದೇಹ,ನಾನು ಇಂದ್ರಿಯ, ಇದು ನನ್ನ ಮನಸ್ಸು, ಎಂಬ ಯಾವ ರೀತಿಯ ಯೋಚನೆಗಳು ಏಳುವುದೇ ಇಲ್ಲ. ಕಣ್ಣಿಗೆ ಕಾಣುವ ಎಲ್ಲವೂ ಚೈತನ್ಯವೇ ಎಂಬ ಜಡವಾದ ನೋಟ ಇರುತ್ತದೆ.
ಬಾಹ್ಯಪ್ರಪಂಚದ ಕಾರ್ಯಗಳಿಂದ ಅವನಿಗೆ ಯಾವ ಬಾಧೆಯೂ ಆಗುವುದಿಲ್ಲ,ಏಕೆಂದರೆ ಅಲ್ಲಿ ನೋಡುವವ, ಎಂಬುವರೇ ಇಲ್ಲ. ಬರಿಯ ನೋಟವೇ ಇರುವುದರಿಂದ, ಅವನು ವಸ್ತುವನ್ನು ಗುರುತಿಸುವಾಗಲೂ, ಒಂದೇ ಸಮನಾದ ಸ್ಥಿತಿಯಲ್ಲಿ ಇರುತ್ತಾನೆ. ಇಂತಹ ಸ್ಥಿತಿಗೆ ಸಹಜಸ್ಥಿತಿ ಎಂದು ಹೆಸರು. ಅಂತಹ ಸ್ಥಿತಿಯಲ್ಲಿ ಇರುವವನು, ಯಾವ ವಿಕಲ್ಪಗಳು ಇಲ್ಲದ ನಿರ್ವಿಕಲ್ಪ ಸಮಾಧಿಯಲ್ಲಿ ಇರುತ್ತಾನೆ

ಸಮಸ್ತ ಬ್ರಹ್ಮಾಂಡವು ನಮ್ಮ ದೇಹದಲ್ಲಿ ಇದೆ ಮತ್ತು ನಮ್ಮ ಪೂರ್ಣ ದೇಹ ಹೃದಯದಲ್ಲಿದೆ ಆದ್ದರಿಂದ ಬ್ರಹ್ಮಾಂಡವೇ ನಮ್ಮ ಹೃದಯದಲ್ಲಿ ಇದೆ. ಪ್ರಪಂಚವು ಮನಸ್ಸು ಅಲ್ಲದೆ ಬೇರೆ ಏನೂ ಅಲ್ಲ. ಮನಸ್ಸು ಹೃದಯವಲ್ಲದೆ ಬೇರೆ ಏನೂ ಅಲ್ಲ. ಆದ್ದರಿಂದ ಪ್ರಪಂಚದ ಎಲ್ಲಾ ಕಥೆಗಳು ಹೃದಯದಲ್ಲಿ ಕೊನೆಗೊಳ್ಳುತ್ತದೆ.

ಈ ಪ್ರಪಂಚಕ್ಕೆ, ಸೂರ್ಯನು ಯಾವ ರೀತಿಯೋ,ಅದೇ ರೀತಿ ದೇಹಕ್ಕೆ ಹೃದಯವೇ ಸೂರ್ಯ. ಸಹಸ್ರಾರದಲ್ಲಿ ತೋರುವ ಮನಸ್ಸು,

ಪ್ರಪಂಚದಲ್ಲಿ ತೋರುವ ಚಂದ್ರನ ಕಲೆಯಂತೆ ಇದೆ. ಸೂರ್ಯನು ಚಂದ್ರನಿಗೆ ಯಾವ ರೀತಿ ಬೆಳಕನ್ನು ನೀಡುವನೋ ಅದೇರೀತಿ ಹೃದಯವು ಮನಸ್ಸಿಗೆ ಬೆಳಕನ್ನು ನೀಡುತ್ತದೆ.

ಸೂರ್ಯನು ಇಲ್ಲದಿದ್ದರೂ, ಸೂರ್ಯನ ಕಿರಣಗಳ ಸಹಾಯದಿಂದಲೇ, ಹುಣ್ಣಿಮೆಯ ದಿನ,, ಯಾವ ರೀತಿ ಚಂದ್ರನು ಕಂಡುಬರುವನೋ, ಅದೇ ರೀತಿ ಹೃದಯಸ್ಥಾನದಲ್ಲಿ ಇಲ್ಲದ ಮನುಷ್ಯನು ಬರಿಯ ಮನಸ್ಸನ್ನು ತಿಳಿಯುತ್ತಾನೆ.

ತನ್ನ ನಿಜವಾದ ಆತ್ಮಜ್ಯೋತಿಯನ್ನು ತನ್ನಲ್ಲಿ ಕಂಡುಕೊಳ್ಳದವ ಮತ್ತು ಎಲ್ಲ ವಸ್ತುಗಳನ್ನು ಮನಸ್ಸಿನಿಂದಲೇ ತಿಳಿಯುತ್ತಿರುವಂತವ, ಭ್ರಾಂತಿಗೆ ಸಿಲುಕಿದ ಅಜ್ಞಾನಿ ಎನ್ನಬೇಕು. ಮನಸ್ಸಿಗೆ ಮರುಳಾಗಿ ತನ್ನ ನಿಜ ಸ್ವರೂಪವನ್ನು ಮರೆತಿರುತ್ತಾನೆ. ಬೆಳಗಿನ ಬೆಳಕಿನಲ್ಲಿ, ಬೆಳದಿಂಗಳು ಯಾವ ರೀತಿಯಲ್ಲಿ ಸೇರಿರುವುದೋ, ಅದೇ ರೀತಿಯಲ್ಲಿ,ಹೃದಯದಲ್ಲಿ ನೆಲೆಸಿರುವ ಜ್ಞಾನಿಗಳು, ಮನೋ ಕಲ್ಪನೆಗಳು ಮತ್ತು ವಿಕಲ್ಪಗಳು ಎಲ್ಲಾ ತೊಲಗಿ,, ಹೃದಯದಲ್ಲಿರುವ ಜ್ಯೋತಿಯಲ್ಲಿ ಸೇರಿರುವುದನ್ನು ನೋಡುತ್ತಾರೆ.

ಪ್ರಜ್ಞಾನ ಎನ್ನುವುದು ಮನಸ್ಸಿನ ಮೇಲ್ನೋಟದ ಅರ್ಥ. ಆದರೆ ಅದರ ನಿಜವಾದ ಅರ್ಥ ಹೃದಯ ಎಂದು ಜ್ಞಾನಿಗಳು ತಿಳಿದಿರುತ್ತಾರೆ. ಉತ್ಕೃಷ್ಟವಾದದ್ದು ಹೃದಯವಲ್ಲದೆ ಬೇರೆ ಏನೋ ಅಲ್ಲ..
ನೋಡುವವನು ಮತ್ತು ನೋಡಿದ ವಸ್ತುಗಳು ಬೇರೆ ಬೇರೆ, ಎಂದು ತಿಳಿಯುವ ಕಲ್ಪನೆ, ಆಗುವುದು ಮನಸ್ಸಿನಲ್ಲಿಯೇ. ಹೃದಯದಲ್ಲಿ ನೆಲೆನಿಂತಿರುವವರಿಗೆ ನೋಡುವವ ಮತ್ತು ನೋಡಿದ ವಸ್ತು ಎರಡೂ ಒಂದೇ ಆಗಿರುತ್ತದೆ.

ನಿದ್ರೆಯಲ್ಲಿ, ಅತಿಯಾದ ಸಂತೋಷದಲ್ಲಿ, ದುಃಖದಲ್ಲಿ, ಹೆದರಿಕೆಯಲ್ಲಿ ಅಥವಾ ಮೂರ್ಛೆಯಲ್ಲಿ ಗೋಚರವಾಗದ ಆಲೋಚನೆಗಳು, ತನ್ನ ಮೂಲ ಸ್ಥಾನವಾದ ಹೃದಯವನ್ನು, ಹೋಗಿ ಸೇರುತ್ತದೆ. ಅಂತಹ ಸಮಯಗಳಲ್ಲಿ ಹೃದಯದಲ್ಲಿ ಯೋಚನೆಗಳು ವಿಲೀನವಾಗಿರುವುದನ್ನು, ಅಜ್ಞಾನಿಯ ತಿಳಿಯಲಾರ. ಜ್ಞಾನಿಯಾದವನು ಅಥವಾ ಸಮಾಧಿಯಲ್ಲಿರುವವ ಅದನ್ನು ತಿಳಿಯುತ್ತಾನೆ. ಆದ್ದರಿಂದಲೇ ಅಜ್ಞಾನಿಗಳು ಮತ್ತು ಜ್ಞಾನಿಗಳು ಎಂಬ ನಾಮಗಳು ಉಂಟಾಗಿವೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಹೃದಯದ ವಿಜ್ಞಾನ ಎಂಬ ಐದನೆಯ ಅಧ್ಯಾಯ.

ಆರನೆಯ ಅಧ್ಯಾಯ.

# ಮನಸ್ಸಿನ ನಿಯಂತ್ರಣ

ಹೃದಯದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಸಿಕೊಟ್ಟ ರಮಣಮಹರ್ಷಿಗಳು ಈಗ ಮನಸ್ಸಿನ ಹತೋಟಿಯ ಬಗ್ಗೆ ಉಪದೇಶವನ್ನು ಕರುಣಿಸಿದ್ದಾರೆ.

ಇಂದ್ರಿಯಗಳ ಸೆಳೆತಕ್ಕೆ ಸಿಕ್ಕಿ ಬಿದ್ದು ಯಾವಾಗಲೂ ಚಿಂತೆಯಲ್ಲಿರುವ ಮನುಷ್ಯನಿಗೆ ಬಲವತ್ತರವಾದ ವಾಸನೆಗಳ ಕಾರಣ, ಮನೋ ನಿಯಂತ್ರಣ ಕಷ್ಟಕರ. ಮಂಗನಂತೆ ವರ್ತಿಸುವ ಚಂಚಲವಾದ ಮನಸ್ಸಿನ ವೇಗವನ್ನು ಸ್ವ ಪ್ರಯತ್ನದಿಂದ ನೈಧಾನ್ಯ ಗೊಳಿಸಿದಾಗ,ಮನಸ್ಸಿನ ಭಾವನೆಗಳೂ ಚಟುವಟಿಕೆಗಳು ಹತೋಟಿಗೆ ಬಂದು,. ಅದು ಕಟ್ಟಿ ಹಾಕಲ್ಪಟ್ಟ ಪ್ರಾಣಿಯಂತೆ ದಾರಿತಪ್ಪಿ ಹೋಗುವುದಿಲ್ಲ.. ವಾಯು ರೋಧದಿಂದ ಮನಸ್ಸಿನ ನಿಯಂತ್ರಣ ಸಾಧಿಸಬಹುದು. ಯಾವಾಗ ಯೋಚನೆಗಳು ನಿಯಂತ್ರಣವಾಗುವುದೋ ಆಗ, ಮೂಲ ನೆಲೆಯಲ್ಲಿ ಸ್ಥಿರವಾಗಿ ನಿಲ್ಲಲು ಸಾಧ್ಯವಾಗುತ್ತದೆ. ಉಸಿರಾಟದ ನಿಯಂತ್ರಣವೆಂದರೆ ಮನಸ್ಸಿನಿಂದ ಉಸಿರಾಟದ ಚಲನವಲನಗಳನ್ನು ಗಮನಿಸುತ್ತಿರುವುದು. ಈ ರೀತಿಯಾದ ವೀಕ್ಷಣೆಯಿಂದ ಕುಂಭಕವು ಲಭ್ಯವಾಗುತ್ತದೆ.

ಯಾರಿಗೆ ಈ ರೀತಿಯಾದ ಕೇವಲ ಕುಂಭಕವನ್ನು( ಉಸಿರಾಟದ ಚಲನವಿಲ್ಲದ ಸ್ಥಿತಿ ಮತ್ತೂ ಮನೋಭಾವನೆ ಇಲ್ಲದೇ ಇರುವ ಈ ಗಮನವೇ ಕೇವಲ ಅರಿವು, ಇದು, ಯಾರಿಗೆ,ಸಾಧ್ಯವಿಲ್ಲವೋ

ಅಂತಹವರಿಗೆ ಹಠಯೋಗದ ಮಾರ್ಗವನ್ನು ಹೇಳಲಾಗಿದೆ. ಅಂದರೆ, ಒಂದು ಎಣಿಕೆಯಷ್ಟು ರೆಚಕವನ್ನೂ ಒಂದು ಎಣಿಕೆಯಷ್ಟು ಪೂರಕವನ್ನು ಮತ್ತು ನಾಲ್ಕು ಎಣಿಕೆಗಳ ಕುಂಭಕವನ್ನು ಅಭ್ಯಾಸ ಮಾಡಿದಾಗ ಜೀವಶಕ್ತಿ ಅಥವಾ ಚಲನಶಕ್ತಿಯ ಬಲದಿಂದ ನಾಡಿಗಳು ಶುದ್ಧೀಕರಿಸುತ್ತದೆ. ಯಾವಾಗ ನಾಡಿಗಳು ಶುದ್ಧವಾಗುವುದೋ ಆಗ ಉಸಿರಾಟವು ನಿಯಂತ್ರಣಕ್ಕೆ ಬರುತ್ತದೆ. ಉಸಿರಾಟದ ಪೂರ್ಣ ನಿಯಂತ್ರಣಕ್ಕೆ ಶುದ್ಧ ಕುಂಭಕ ಎನ್ನುತ್ತಾರೆ.

ಜ್ಞಾನಿಗಳಾದರೋ, ನಾನು ದೇಹ ಎಂಬ ಅಭಿಮಾನವನ್ನು ಬಿಡುವುದು ರೇಚಕ ಎಂದೂ, ಆತ್ಮನ ಅನ್ವೇಷಣೆಗೆ ಅಥವಾ ಶೋಧನೆಗೆ ಪೂರಕವೆಂದೂ, ಸಹಜ ಸ್ಥಿತಿಯಲ್ಲಿ ಆತ್ಮನಲ್ಲಿ ನಿಲ್ಲುವುದು ಕುಂಭಕ ಎಂದು ತಿಳಿಯುತ್ತಾರೆ.

ಮಂತ್ರಗಳ ಪುನಶ್ಚರಣೆ ಯಿಂದದಲೂ ಮನಸ್ಸನ್ನು ತಡೆಹಿಡಿಯಬಹುದು. ಆಗ ಮನಸ್ಸು ಮಂತ್ರಮಯವಾಗಿ, ಪ್ರಾಣದಲ್ಲಿ ಒಂದಾಗುತ್ತದೆ. ಮಂತ್ರದ ಉಚ್ಚಾರಣೆಯ ಅಂಶಗಳು ಪ್ರಾಣದಲ್ಲಿ ಲೀನವಾದಾಗ ಅದನ್ನು ಧ್ಯಾನ ಎನ್ನುತ್ತಾರೆ. ಧ್ಯಾನವು ತೀವ್ರವಾಗಿ ಧೃಡವಾದಾಗ ಸಹಜಸ್ಥಿತಿಗೆ ಮಾರ್ಗ ವಾಗುತ್ತದೆ. ಮಹಾಪುರುಷರ ಮತ್ತು ಸಿದ್ಧರುಗಳ ಸಂಘದಲ್ಲಿ ನಿರಂತರವಾಗಿ ಇದ್ದಾಗಲೆಲ್ಲಾ,, ಮನಸ್ಸು ತನ್ನ ಮೂಲದಲ್ಲಿ, ವಿಲೀನ ಗೊಳ್ಳುತ್ತದೆ.
ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ.
ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಮನಸ್ಸಿನ ನಿಯಂತ್ರಣ ಎಂಬ ಆರನೆಯ ಅಧ್ಯಾಯವು.

ಏಳನೆಯ ಅಧ್ಯಾಯ

# ಆತ್ಮ ತತ್ವದ ವಿಚಾರಣೆ ಅರ್ಹತೆ ಮತ್ತು ಘಟಕಗಳು.

**ಪ್ರಶ್ನೆ**. ಆತ್ಮ ವಿಚಾರಣೆಯ ಸ್ವಭಾವ ಅಥವಾ ಪ್ರಕೃತಿ ಅಥವಾ ಸಹಜ ಗುಣಗಳೇನು? ಅದರ ಉದ್ದೇಶವೇನು? ಈ ರೀತಿಯಲ್ಲಿ ವಿಚಾರಣೆ ನಡೆಸಿದರೆ ಇದಕ್ಕಿಂತ ಹೆಚ್ಚಿನ ಲಾಭ ಇರುವುದೇ?

**ಮಹರ್ಷಿಗಳು**. ಎಲ್ಲ ಯೋಚನೆಗಳು, ಒಟ್ಟು ವಿಚಾರ 'ನಾನು' ಎನ್ನುವ ಆಲೋಚನೆಯೇ. ಆದ್ದರಿಂದ, ಇದರ ಮೂಲವನ್ನು ಹುಡುಕುವುದು ಮುಖ್ಯವಾಗಿ ಇರಬೇಕು.
ಇದು ಆತ್ಮ ವಿಚಾರ ಅಥವಾ ಶೋಧನೆಯೆ ಹೊರತು ಶಾಸ್ತ್ರಗಳ ಓದುವಿಕೆ ಅಲ್ಲ. ಅದರ ಮೂಲ ಅಥವಾ ತಳ ದೊರೆತಾಗ ಅಹಂಕಾರವು ಅದರಲ್ಲಿ ವಿಲೀನವಾಗುತ್ತದೆ. ಆತ್ಮದ ಪ್ರತಿಬಿಂಬವೇ ಅಹಂಕಾರ. ಯಾವಾಗ ಅಹಂಕಾರವು ಪೂರ್ಣವಾಗಿ ನಶಿಸಿಹೋಗುತ್ತದೆಯೋ, ಆಗ ಉಳಿದಿರುವುದು ಬೃಹತ್ ಗಾತ್ರದ ಪರಿಪೂರ್ಣತೆ ಯಿಂದ ಕೂಡಿದ ಆತ್ಮನ್ ಒಬ್ಬನೇ.
ಎಲ್ಲ ಸಂಕಟಗಳಿಂದ ಬಿಡುಗಡೆ ಹೊಂದುವುದು ಆತ್ಮ ಶೋಧನೆಯ ಫಲ. ಎಲ್ಲ ಫಲಗಳಿಗಿಂತ ಇದು ಉತ್ತಮವಾದ ಫಲ. ಅನೇಕ ರೀತಿಯ ಅದ್ಭುತವಾದ ಅತೀಂದ್ರಿಯ ಶಕ್ತಿಗಳನ್ನು,ಬೇರೆ ವಿಧಾನಗಳಿಂದ ಪಡೆಯಬಹುದು ಆದರೆ ಎಲ್ಲದರಿಂದ ಬಿಡುಗಡೆ ಹೊಂದಿ, ಸ್ವಾತಂತ್ರ್ಯವನ್ನು ತಲುಪುವ ದಾರಿ, ಆತ್ಮ ವಿಶ್ಲೇಷಣೆ ಒಂದೇ.

**ಪ್ರಶ್ನೆ**. ಇದಕ್ಕೆ ಯಾರು ಅರ್ಹರು? ತಮ್ಮ ತಮ್ಮ ಅರ್ಹತೆಯ ಬಗ್ಗೆ ತಿಳುವಳಿಕೆ ಅವರಿಗೆ ಉಂಟಾಗುವುದೇ?

**ಮಹರ್ಷಿಗಳು**. ಉಪಾಸನೆಗಳಿಂದ ಮತ್ತು ಇತರ ಸಾಧನೆಗಳಿಂದ ಯಾರ ಮನಸ್ಸು ಶುದ್ಧಿಯಾಗಿದೆಯೋ ಅಥವಾ ಹಿಂದಿನ ಜನ್ಮದ ಪುಣ್ಯ

ಫಲಗಲಿಂದಲೋ ಅಥವಾ ದೇಹದ ಮತ್ತು ಇಂದ್ರಿಯಗಳ ಅಸ್ಥಿರತೆ, ಬಗ್ಗೆ ಗಮನಿಸಿ, ಯಾವಾಗ ಆತನ ಮನಸ್ಸು ಇಂದ್ರಿಯಗಳಿಂದ ಕಾರ್ಯಗತವಾಗದೆ, ಅದರ ಮತ್ತು ದೇಹದ ನಶ್ವರತೆ ಬಗ್ಗೆ ತಿಳಿದು, ಸಹನಶೀಲನಾಗಿ, ವರ್ತಿಸುತ್ತಾನೆಯೋ ಅಂತಹವನು ಆತ್ಮಶೋಧನೆಗೆ ಅರ್ಹನು.

ದೇಹದ ಅಸ್ಥಿರತೆಯ ಬಗ್ಗೆ ಜ್ಞಾನ ಮತ್ತು ಇಂದ್ರಿಯಗಳ ಬಳಕೆಯಿಂದ ಉಂಟಾದ ವಸ್ತುಗಳ ಬಗ್ಗೆ ಅನಾಸಕ್ತಿ ಉಳ್ಳವ, ಈ ಎರಡು ಚಿನ್ಹೆಗಳಿಂದ ಆತ್ಮ ಶೋಧನೆಗೆ ತಾನು ಅರ್ಹನೆಂದು ತಿಳಿದು ಕೊಳ್ಳಬಹುದು.

**ಪ್ರಶ್ನೆ**. ಯಾರು, ತಮ್ಮ ಅನ್ವೇಷಣೆಯಲ್ಲಿ, ಇಂದ್ರಿಯಗಳ ಒಡನಾಟದಲ್ಲಿ ಅನಾಸಕ್ತಿಯಿಂದ ಇರುವರೋ,,ಮತ್ತು ಯಾವ ಪಕ್ಷಪಾತವೂ ಇಲ್ಲದೆ ಇರುವರೋ, ಅಂತಹವರಿಗೆ, ಭಜನೆ, ಸಂಧ್ಯಾವಂದನೆ, ಪೂಜೆ,ಮಂತ್ರ ಜಪ, ಹೋಮಗಳು, ವೇದಗಳ ಪಠಣ, ತೀರ್ಥಯಾತ್ರೆಗಳು, ತ್ಯಾಗ, ದಾನ, ಮತ್ತು ಧಾರ್ಮಿಕ ನಡೆನುಡಿಗಳು ಎಲ್ಲವೂ ಅವಶ್ಯಕವೇ? ಅಥವಾ ಅವು,ಸಮಯವನ್ನು ಹಾಳು ಮಾಡುವಂತಹ ಕಾರ್ಯಗಳೆ? ಇವುಗಳಿಂದ ಏನಾದರೂ ಉಪಯೋಗವಿದೆಯೇ?

**ಮಹರ್ಷಿಗಳು**. ಮುಮುಕ್ಷುಗಳು ಆಗದವರಿಗೆ ಮತ್ತು ಆರಂಭದಲ್ಲಿ ಇರುವವರಿಗೆ, ಬಂಧನಗಳಿಂದ ಸ್ವಲ್ಪ ಸ್ವಲ್ಪ ಬಿಡುಗಡೆ ಹೊಂದಿರುವಂತಹವರಿಗೆ ಮೇಲೆ ಹೇಳಿದ ಕ್ರಿಯೆಗಳು ಎಲ್ಲವೂ ಮನಸ್ಸನ್ನು ಶುದ್ಧಗೊಳಿಸುವ ಕ್ರಿಯೆಯಲ್ಲಿ ಉಪಯೋಗ ವಾಗಬಹುದು.

ಸದ್ಗುಣಗಳಿಂದ ಕೂಡಿದ ದೇಹ ಮಾತು ಮತ್ತು ಮನಸ್ಸಿನ ನಡತೆಗಳು ದುರ್ಗುಣದಿಂದ ಕೂಡಿದ ದೇಹ ಮಾತು ಮತ್ತು ಮನಸ್ಸಿನ ನಡತೆಗಳು ವಿರುದ್ಧವಾಗಿ ಕೆಲಸಮಾಡುವುವು. ಈ ಎಲ್ಲ ಸದ್ಗುಣಗಳು ಯೋಗ್ಯ

ಅಥವಾ ಸಮರ್ಥರಾದವರಲ್ಲಿ ಬಲವತ್ತರಗೊಂಡು, ಪಕ್ವತೆಯನ್ನು ಹೊಂದಿ, ಈ ಪ್ರಪಂಚಕ್ಕೆ ಉಪಕಾರವಾಗುತ್ತದೆ.
ಪಕ್ವಗೊಂಡ ಮನಸ್ಸುಳ್ಳ ಮನುಷ್ಯರು, ತಮ್ಮನ್ನು ನಿದರ್ಶನರನ್ನಾಗಿ, ತೊಡಗಿಸಿಕೊಂಡು, ಸಮಾಜದ ಒಳಿತಿಗಾಗಿ ಕಾರ್ಯಗಳನ್ನು ಮಾಡುತ್ತಿದ್ದರೂ, ಯಾವ ರೀತಿಯ ಧರ್ಮಗ್ರಂಥಗಳ ಕಟ್ಟಲೆಗಳಿಗೂ ಒಳಗಾಗುವುದಿಲ್ಲ.
ಬಂಧನದಿಂದ ಮುಕ್ತನಾಗಿ ಇರದ ಸ್ಥಿತಿಗಳು ಮತ್ತು ಎಲ್ಲ ರೀತಿಯ ನಡೆನುಡಿಗಳು ಆತ್ಮ ಚಿಂತನಕ್ಕೆ ಸರಿಯಾಗಲಾರದು.

ಜೀವನದ ಪಥದಲ್ಲಿ ಮಾಡ ಬೇಕಾದ ಪೂಜೆ,ಪುನಸ್ಕಾರಗಳು, ಸಮಾಜದ ಕಟ್ಟಳೆಗಳನ್ನು ಮೀರಿ ಇರುವಂಥಹವರಿಗೆ , ಸದಾ ಆತ್ಮ ಚಿಂತನೆಯಲ್ಲಿ ಇರುವವರಿಗೆ, ಅದು,ಪಾಪಕೃತ್ಯವೇ ಆಗುವುದಿಲ್ಲ. ಆತ್ಮ ಶೋಧನೆ ಎಂಬುವುದು, ಎಲ್ಲ ರೀತಿಯ ಶುದ್ಧೀಕರಣಗಳಿಗಿಂತ, ಅತ್ಯಂತ ಮಹತ್ತರವಾದ ತಪಸ್ಸು.

ಎಲ್ಲರ ಒಳಿತಿಗಾಗಿ, ತ್ಯಾಗದಿಂದ, ಒಂಟಿಯಾಗಿ ಮಾಡುವ ಮತ್ತು ಒಟ್ಟಾಗಿ ಸಹಯೋಗದಲ್ಲಿ ಮಾಡುವಂತಹ ಎರಡು ರೀತಿಯ ಜೀವನಶೈಲಿಯ ಮನುಷ್ಯರನ್ನು ನಾವು ಸಮಾಜದಲ್ಲಿ ಕಾಣಬಹುದು

**ಪ್ರಶ್ನೆ.** ಆತ್ಮಚಿಂತನೆ ಅಲ್ಲದ, ಮತ್ತೆ ನಿರ್ವಾಣದತ್ತ ಸಾಗುವ ಬೇರೆ ಯಾವುದಾದರೂ ಮಾರ್ಗ ಅಥವಾ ಉಪಾಯ ಇದೆಯೇ?

**ಮಹರ್ಷಿಗಳು**. ಒಬ್ಬನು ಏನನ್ನೋ ಪಡೆಯಲು ಶ್ರಮಿಸುತ್ತಾನೆ. ಮತ್ತೊಬ್ಬನು ಪ್ರಯತ್ನಿಸಿದ್ದ ಗುರುಗಳಲ್ಲಿ ಶರಣಾಗುತ್ತಾನೆ, ಮೊದಲನೆಯವ, ಇದರಲ್ಲಿ ಬಹಳ ಕಾಲ ಶ್ರಮಿಸಿ ಕಡೆಯಲ್ಲಿ ಆತ್ಮದರ್ಶನದತ್ತ ಸಾಗುತ್ತಾನೆ. ಒಂದೇ ವಸ್ತುವಿನತ್ತ ಧಾರಣೆಯಿಂದ ಧ್ಯಾನ ಮಾಡುವವನ ಮನಸ್ಸು ಅದರಲ್ಲೇ

ಕೇಂದ್ರೀಕೃತವಾಗಿರುವುದರಿಂದ ಅವನಿಗೆ ಆತ್ಮದಲ್ಲಿ ನಿಲ್ಲುವುದು ಸುಲಭವಾಗುತ್ತದೆ.

ಸದಾ ಜ್ಞಾನದಲ್ಲಿ ನಿರತನಾದ ಅವನಿಗೆ ಅವನ ಇಚ್ಛೆಯಿಲ್ಲದೆಯೇ, ಆತ್ಮದರ್ಶನ ಆಗಬಲ್ಲದು. ಆದರೆ ಯಾವನು, ಅದನ್ನು ಹುಡುಕುತ್ತಾ ಹೋಗುವನೋ ಅಥವಾ ಅದರ ಅನ್ವೇಷಣೆಯಲ್ಲಿ ತೊಡಗಿರುವ ಅಂತತಹವನು, ಆತ್ಮನಲ್ಲಿ ನಿಲ್ಲುವುದನ್ನು ತಿಳಿದು, ಆಮೇಲೆ ಅದರಲ್ಲಿ ಒಂದಾಗುತ್ತಾನೆ.

ದೇವರು, ಮಂತ್ರಗಳು ಅಥವಾ ಇನ್ನೂ ಯಾವುದಾದರೂ ಉತ್ತಮ ವಸ್ತುಗಳ ಮೇಲೆ ಧ್ಯಾನವನ್ನು ಇಡುವವನಿಗೂ, ಕಡೆಯಲ್ಲಿ ಆತ್ಮದಲ್ಲಿ ವಿಲೀನವಾಗಲು ಸಹಕಾರಿಯಾಗುತ್ತದೆ.

ಧ್ಯಾನದಲ್ಲಿ ನಿರತನಾದವನಿಗೂ ಸತ್ಯಾನ್ವೇಷಣೆ ದಾರಿಯಲ್ಲಿ ಇರುವವನಿಗೂ, ಗುರಿ ಒಂದೇ. ಒಬ್ಬ ಜ್ಞಾನಾರ್ಜನೆ ಇಂದ ಸ್ಥಿರತೆಯನ್ನು ಸಂಪಾದಿಸಿದರೆ, ಮತ್ತೊಬ್ಬ ಮನಸ್ಸಿನ ಹತೋಟಿಯಿಂದ ಸ್ಥಿರತೆಯನ್ನು ಪಡೆಯುತ್ತಾನೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಆತ್ಮತತ್ವ ವಿಚಾರಣೆ ಎಂಬ ಏಳನೆಯ ಅಧ್ಯಾಯವು.

ಎಂಟನೆಯ ಅಧ್ಯಾಯ

## ಜೀವನದ ವಿವಿಧ ಹಂತಗಳು.

ನಾಲ್ಕು ವಿಧದ ಆಶ್ರಮಗಳಲ್ಲಿ ನಡತೆಗಳ ಬಗ್ಗೆ ಶ್ರೀ ರಮಣರ ಮಹರ್ಷಿಗಳು ಕರುಣಿಸಿದ ವಾಣಿ.

ಬ್ರಹ್ಮನ್ ಬಗ್ಗೆ ಚಿಂತನೆ ಮಾಡಲು ಇಚ್ಛಿಸುವವರು, ಬ್ರಹ್ಮಚಾರಿಯೋ ಅಥವಾ,ಗೃಹಸ್ಥನೋ, ಆಗಿರಲಿ, ಕಾಡಿನಲ್ಲಿ ಇರುವವ ಅಥವಾ ಸನ್ಯಾಸಿಯಾಗಿರಲಿ, ಅಥವಾ ಹೆಣ್ಣುಮಗಳು ಅಥವಾ ಶೂದ್ರ, ಆಗಿರಲಿ ಯಾರಾದರೂ ಪಕ್ವದಿಂದ,ಅರ್ಹತೆ ಹೊಂದಿದ್ದರೆ, ಅಂತಹವರು, ಬ್ರಹ್ಮನ ಬಗ್ಗೆ ಅನ್ವೇಷಣೆ ಮಾಡಲು ಯೋಗ್ಯರಾಗುತ್ತಾರೆ.

ಈ ಬ್ರಹ್ಮಚರ್ಯ ಗೃಹಸ್ಥಾಶ್ರಮ ವಾನಪ್ರಸ್ಥ ಸಂನ್ಯಾಸ ಎಂಬ ನಾಲ್ಕು ಕ್ರಮದಿಂದ ಕೂಡಿದ ಆಶ್ರಮಗಳು ಸತ್ಯವನ್ನು ಕಂಡುಕೊಳ್ಳಲು ಮೆಟ್ಟಿಲುಗಳ ರೀತಿ ಇವೆ. ಆದರೆ ಪಕ್ವವಾದ ಮನಸ್ಸು ಉಳ್ಳವರಿಗೆ ಈ ಮೆಟ್ಟಲುಗಳು ನಿರರ್ಥಕ.

ಪ್ರಪಂಚದ ವ್ಯವಹಾರಗಳು ಸರಾಗವಾಗಿ ನಡೆಯಲೆಂದು ಆಶ್ರಮಗಳನ್ನು ವಿಧಿಸಲಾಗಿದೆ. ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥಗಳು ಜ್ಞಾನ ಸಂಪಾದನೆಗೆ ಏನೂ ತೊಡಕು ಆಗುವುದಿಲ್ಲ.

ಸಂನ್ಯಾಸಾಶ್ರಮ ಶುದ್ಧ ಜ್ಞಾನಾರ್ಜನೆಗಾಗೆಯೇ ಹೊರತು, ಯಾವ ರೀತಿಯ ಕಾಷಾಯವಸ್ತ್ರ ಅಥವಾ ಮುಂಡನ ಮಾಡಿದ ತಲೆಯ ಅಗತ್ಯಗಳಿಗಾಗಿ, ಅಲ್ಲ. ಜ್ಞಾನಮಾರ್ಗವು ಸುಗಮವಾಗಿ ನಡೆಯಲು, ಮತ್ತು ಎಲ್ಲ ಅಡೆತಡೆಗಳ ನಿವಾರಣೆಗಾಗಿ, ಸನ್ಯಾಸ ಆಶ್ರಮವನ್ನು ಸೂಚಿಸಲಾಗಿದೆ.

ಯಾವ ಶಕ್ತಿಗಳು ಬ್ರಹ್ಮಚರ್ಯದಲ್ಲಿ ಶಿಸ್ತಿನಿಂದ ಕಲಿಕೆಯಿಂದ ಮತ್ತು ವಿದ್ಯೆಯಿಂದ ಬೆಳೆದು ಬಲವತ್ತರ ಗೊಂಡಿದೆಯೋ ಅಂತಹವರು ತಮ್ಮ ಮುಂದಿನ ಆಶ್ರಮಗಳಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಬೆಳೆಗುತ್ತಾರೆ.

ಬ್ರಹ್ಮಚರ್ಯ ಪಾಲನೆಯಿಂದ ಗೃಹಸ್ಥನ ನೆಲೆಯಲ್ಲಿಯೇ ಶುದ್ಧತೆಯನ್ನು ಪಡೆಯಬಹುದು. ಈ ಗೃಹಸ್ಥಾಶ್ರಮವು ಎಲ್ಲರ ಏಳಿಗೆಗಾಗಿ ಇಡಲ್ಪಟ್ಟಿದೆ.

ಯಾವ ರೀತಿಯ ಬಂಧನಕ್ಕೂ ಒಳಗಾಗದೆ ಇರುವಂತಹ ಗೃಹಸ್ಥನಿಗೆ ಕೂಡ ಜ್ಯೋತಿ ಸ್ವರೂಪ, ಉಜ್ವಲವಾಗಿ ಬೆಳಗುತ್ತದೆ. ಇದರಲ್ಲಿ ಸಂಶಯವೇ ಇಲ್ಲ.

ಮೂರನೆಯ ಆಶ್ರಮವಾದ ವಾನಪ್ರಸ್ಥವನ್ನು ತಪಃ ಕ್ರಿಯೆಗಾಗಿ ಇಡಲ್ಪಟ್ಟಿದೆ, ಎಂದು ವಿವೇಕ ಉಳ್ಳವರು ಮತ್ತು ಜ್ಞಾನಿಗಳು ಹೇಳುತ್ತಾರೆ. ಇಲ್ಲಿ, ಮಡದಿಯ ಸಾಂಗತ್ಯ ಇದ್ದೋ, ಅಥವಾ ಇಲ್ಲದೆಯೋ ಇರಬಹುದು. ಪಕ್ವವಾದ ಮನಸ್ಸಿನಿಂದ ಕೂಡಿದ ಯೋಗಿಗೆ, ಮತ್ತು ಎಲ್ಲ ರೀತಿಯ ಪಾಪಗಳನ್ನು ಸುಟ್ಟವನಿಗೆ, ನಾಲ್ಕನೆಯ ಆಶ್ರಮ ಕಾಲಕಾಲಕ್ಕೆ ಸ್ವಾಭಾವಿಕವಾಗಿ ಒದಗಿ ಬರುತ್ತದೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ವಿವಿಧ ಹಂತಗಳು ಎಂಬ ಎಂಟನೆಯ ಅಧ್ಯಾಯವು.

ಒಂಬತ್ತನೇ ಅಧ್ಯಾಯ

# ಹೃದಯ ಗ್ರಂಥಿಯ ಬೇಧನೆ.

ವೇದಾಂತದ ಬಗ್ಗೆ ತಿಳಿದವರಿಗೂ, ಸಂಶಯವಿರುವ ಗ್ರಂಥಿಭೇದದ ಬಗ್ಗೆ ರಮಣ ಮಹರ್ಷಿಗಳು ವಿಷದವಾಗಿ ಕೆಳಕಂಡಂತೆ ತಿಳಿಸಿದ್ದಾರೆ.

ಆತ್ಮಕ್ಕೂ ದೇಹಕ್ಕೂ ಇರುವ ಜೋಡಣೆಯೇ ಗ್ರಂಥಿ. ಈ ಸಂಬಂಧದಿಂದಲೇ ದೇಹದ ಬಗ್ಗೆ ತಿಳುವಳಿಕೆಯನ್ನು ಮತ್ತು ಅದರ ಇರುವಿಕೆಯನ್ನು ಮನುಷ್ಯನು ತಿಳಿಯುತ್ತಾನೆ.

ದೇಹವು ಜಡವಸ್ತು,. ಆತ್ಮನಾದರೋ ಶುದ್ಧ ಅರಿವು. ಇವೆರಡರ ಸಂಬಂಧವನ್ನು, ನಾವು ಜ್ಞಾನದಿಂದ, ವ್ಯವಕಲನ ಮಾಡಬಹುದು. ಶುದ್ಧ ಅರಿವಿನ ಜ್ಯೋತಿಯ, ಬೆಳಕಿನ ಆವರಣದಿಂದ, ದೇಹವು ಕಾರ್ಯಗತವಾಗುತ್ತದೆ. ನಿದ್ರೆಯಲ್ಲಿ ಅಥವಾ ಮೂರ್ಛೆಯಲ್ಲಿ,, ಪ್ರಪಂಚದ ಬಗ್ಗೆ ಆತಂಕ ಅಥವಾ ಭಯ ಇಲ್ಲದಿರುವುದೇ ಆತ್ಮನ ನೆಲೆಯನ್ನು ನಿರ್ಣಯಿಸಲು ಸಾಧ್ಯವಾಗುವುದು.
ಯಾವ ರೀತಿಯಲ್ಲಿ ಕಣ್ಣಿಗೆ ಕಾಣುವ ತಂತಿಗಳಲ್ಲಿ,ಸೂಕ್ಷ್ಮವಾದ ವಿದ್ಯುತ್ ಶಕ್ತಿಯ ಪ್ರವಾಹವು ನಿರ್ಣಯವಾಗುತ್ತದೆಯೋ, ಅದೇ ರೀತಿ. ದೇಹದ ನಾಡಿಗಳಲ್ಲಿ, ಜ್ಯೋತಿ ಸ್ವರೂಪದ ಪ್ರವಾಹ ಹರಿಯುತ್ತದೆ.
ಸೂರ್ಯನು, ಯಾವ ರೀತಿ ಪ್ರಪಂಚವನ್ನು ಬೆಳಗುವನೋ, ಅದೇ ರೀತಿ ಈ ಉಜ್ವಲವಾದ ಅರಿವಿನ ಬೆಳಕು, ದೇಹದ ಮಧ್ಯದ ಗ್ರಂಥಿಯಿಂದ ದೇಹವನ್ನೆಲ್ಲಾ ಬೆಳಗುತ್ತದೆ.
ಈ ರೀತಿಯಾದ ಜ್ಯೋತಿಯ ಹರಡುವಿಕೆಯಿಂದ ದೇಹದಲ್ಲಿ ಅನುಭವಗಳು ಆಗುತ್ತದೆ.. ಈ ಚೈತನ್ಯದ ಅರಿವಿನ ಬೆಳಕಿಗೆ, ಮೂಲ ಕೇಂದ್ರವೇ ಹೃದಯ ಎಂದು ಜ್ಞಾನಿಗಳು ತಿಳಿಸುತ್ತಾರೆ.
ನಾಡಿಗಳಲ್ಲಿ ಶಕ್ತಿಗಳ ಸಂಚಲನದಿಂದ, ಅರಿವಿನ ಜ್ಯೋತಿಯ, ಹರಿಯುವಿಕೆಯು ತಿಳಿಯುತ್ತದೆ. ಈ ಶಕ್ತಿಯು ಒಂದೊಂದು ನಿರ್ದಿಷ್ಟವಾದ ನಾಡಿಗಳನ್ನು ಅಪ್ಪಿಕೊಂಡು ದೇಹದಲ್ಲಿ ಸಹಜವಾಗಿ ಚಲಿಸುತ್ತದೆ. ಶುದ್ಧ ಜ್ಯೋತಿಯು ಪ್ರವಹಿಸುವ ನಾಡಿಗೆ ಸುಷುಮ್ನ ಎನ್ನುವರು. ಇದನ್ನು ಬ್ರಹ್ಮ ನಾಡಿ,ಆತ್ಮನಾಡಿ, ಪರಾನಾಡಿ, ಅಮೃತನಾಡಿ ಎಂದೂ ಕರೆಯುವರು.

ಎಲ್ಲ ದೇಹದ ಭಾಗಗಳಲ್ಲಿ ಜ್ಯೋತಿಯು ಪ್ರವಹಿಸುವುದರಿಂದ, ದೇಹದ ಅಭಿಮಾನ ಉಳ್ಳವರು, ತಾನೇ ದೇಹದ ಯಜಮಾನ ಎಂದುಕೊಂಡು ಪ್ರಪಂಚವು ತನಗಿಂತ ಬೇರೆಯೇ ಎಂದು ತಿಳಿಯುತ್ತಾನೆ.

ಸೂಕ್ಷ್ಮದೃಷ್ಟಿ ಅಥವಾ ವಿವೇಚನಾ ದೃಷ್ಟಿಯುಳ್ಳವರು, ಯಾವಾಗ ತನ್ನನ್ನು ದೇಹದ ಸಂಬಂಧದಿಂದ ಬಿಡಿಸಿಕೊಂಡು ನಿರ್ದಿಷ್ಟವಾದ ರೀತಿಯಲ್ಲಿ ಅನ್ವೇಷಣೆ ಮಾಡಲು ಪ್ರಾರಂಭಿಸುತ್ತಾರೆಯೋ, ಆಗ, ನಾಡಿಗಳಲ್ಲಿ ಮಂಥನವು, ಅಂದರೆ, ಕಡೆಯುವಿಕೆ ಆರಂಭವಾಗುತ್ತದೆ.

ಈ ರೀತಿಯಲ್ಲಿ ನಾಡಿಗಳಲ್ಲಿ ಮಂಥನವು ಆರಂಭವಾದಾಗ ಆತ್ಮನು ಬೇರೆ ನಾಡಿಗಳಿಂದ ಬೇರ್ಪಟ್ಟು, ಸುಷುಮ್ನ ಅಥವಾ ಅಮೃತ ನಾಡಿಗಳಲ್ಲಿ ಬೆರೆಯುವುದರಿಂದ, ಜ್ಯೋತಿ ಸ್ವರೂಪನಂತೆ ಬೆಳಗುತ್ತಾನೆ.
ಈ ರೀತಿಯಾಗಿ ಉಜ್ವಲವಾದ ಅರಿವಿನ ಜ್ಯೋತಿಯು, ಅಮೃತ ನಾಡಿಯನ್ನು ಬೆಳಗಿದಾಗ, ಅದು ಸ್ವಯಂ ಪ್ರಕಾಶಮಾನದ ಆತ್ಮದ ಅರಿವು ಒಂದೇ ಅಲ್ಲದೆ ಮತ್ತೆ ಅಲ್ಲಿ, ಯಾವ ಪ್ರಕಾಶವೂ ಇರುವುದಿಲ್ಲ.
ಅಂತಹ ಜ್ಞಾನೀಯ ಮುಂದೆ,ಏನು ಕಾಣಿಸಿಕೊಂಡರೂ, ಅದಕ್ಕೆ ಸ್ವಂತ ಇರುವಿಕೆಯೇ ಇರುವುದಿಲ್ಲ. ಯಾವ ರೀತಿಯಲ್ಲಿ ಅಜ್ಞಾನಿಯು, ದೇಹವನ್ನು ಗುರುತಿಸಿ ಕೊಳ್ಳುತ್ತಾನೆಯೋ, ಅದೇ ರೀತಿ ಜ್ಞಾನಿಯು,ಆತ್ಮನನ್ನು ವಿಷದವಾಗಿ ತಿಳಿಯುತ್ತಾನೆ.

ಯಾರಲ್ಲಿ ಆತ್ಮಜ್ಞಾನ ಉಂಟಾಗಿರುತ್ತದೋ, ಅಂಥವರಿಗೆ ಒಳಗೆ+ಹೊರಗೆ ಅನ್ನುವ ದ್ವೈತ ಭಾವನೆ ಇಲ್ಲದೇ, ಎಲ್ಲೆಲ್ಲೂ ಇರುವ ಸ್ವಾನುಭೂತಿಯ ಅಱಿವಿನ ಇರುವಿಕೆಯೇ ಜ್ಯೋತಸ್ವರೂಪನಾಗಿ ಇರುತ್ತಾರೆ. ಅಂಥವರು ಹೃದಯ ಗ್ರಂಥಿ ಬೇಧನೆಯಾಗಿರುವರು.,ಎಂದು ತಿಳಿಯಬೇಕು.

ಈ ಹೃದಯ ಗ್ರಂಥಿ ಸಂಬಂಧ, ಎರಡು ವಿಧವಾಗಿ( (ಭಾವಾತ್ಮಿಕ ಮತ್ತು ದೇಹಾತ್ಮಿಕ),) ಇರುತ್ತದೆ. ಒಂದು, ನಾಡಿಗಳ ಜೊತೆ ಬಂಧನ, ಮತ್ತೊಂದು ಮನಸ್ಸಿನ ಜೊತೆ ಬಾಂಧವ್ಯ. ಇದನ್ನು ಗ್ರಹಿಸುವವನಿಗೆ, ಅದು ಅತ್ಯಂತ ಸೂಕ್ಷ್ಮವಾಗಿ ಕಂಡರೂ, ನಾಡಿಗಳ ಸಂಬಂಧದಿಂದ ಸಮಸ್ತ ದೃಶ್ಯ ಪ್ರಪಂಚವನ್ನು ತಿಳಿಯುತ್ತಾನೆ.

ಯಾವಾಗ ಬೆಳಕು ಎಲ್ಲ ನಾಡಿಗಳಿಂದ ಹಿಂದಕ್ಕೆ ಸರಿದು ಒಂದೇ ಆತ್ಮನಾಡಿಯಲ್ಲಿ(ಹೃದಯಗ್ರಂಥಿ) ನಿಲ್ಲುತ್ತದೆಯೋ, ಆಗ, ಅರಿವು, ದೇಹದ ಸಂಬಂಧದಿಂದ ಬೇರ್ಪಟ್ಟು, ಆ ಜ್ಯೋತಿಯು, ಆತ್ಮ ನಂತೆ ನಿಲ್ಲುತ್ತದೆ.
ಯಾವ ರೀತಿಯಲ್ಲಿ ಕಾಯಿಸಿದ ಕಬ್ಬಿಣದ ಗುಂಡು, ಬೆಂಕಿಯ ಒಂದು ಚೆಂಡಿನಂತೆ ಕಾಣುತ್ತದೆಯೋ, ಅದೇ ರೀತಿ ಆತ್ಮ ಅನ್ವೇಷಣೆಯ ಬೆಂಕಿಯಲ್ಲಿ ಕಾದ ದೇಹವು, 'ಆತ್ಮ' ನಾಗಿ ಪ್ರಕಾಶಗೋಳ್ಳುತ್ತದೆ.

ದೇಹಕ್ಕೆ ಸಂಬಂಧಿಸಿದ ಎಲ್ಲ ಹಳೆಯ ವಾಸನೆಗಳೂ ಕಳಚಿಬೀಳುತ್ತವೆ. ದೇಹದ ಪರಿವೆಯೇ ಇಲ್ಲದವನಿಗೆ, ಯಾವ ರೀತಿಯಾದ ಕರ್ತವ್ಯವೂ ಇರುವುದಿಲ್ಲ.

ಎಲ್ಲಾ ಕರ್ಮಗಳಿಂದಲೂ ಮುಕ್ತನಾಗಿ, ಕರ್ತವ್ಯ ರಹಿತನಾದವನಿಗೆ, ಆತ್ಮನ ಹೊರತು ಬೇರೆ ಏನೂ, ಉಳಿಯುವುದಿಲ್ಲ, ಆದ್ದರಿಂದ ಅವನಿಗೆ ಯಾವ ರೀತಿಯ ಶಂಕೆಯೂ ಇರುವುದಿಲ್ಲ.

ಗ್ರಂಥಿಯು,ಒಂದಾವರ್ತಿ ಭೇದನೆ ಗೊಂಡಮೇಲೆ ಮತ್ತೆ ಅದರ ಜೋಡಣೆ ಸಾಧ್ಯವಿಲ್ಲ. ಈ ಅವಸ್ಥೆಗೆ ಸರ್ವೋಚ್ಚಶಕ್ತಿ ಅಥವಾ ಪರಮಶಾಂತಿ ಎನ್ನುತ್ತಾರೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಗ್ರಂಥಿಬೇಧನೆ ಎಂಬ ಒಂಬತ್ತನೆಯ ಅಧ್ಯಾಯ.

ಹತ್ತನೆಯ ಅಧ್ಯಾಯ

# ಸಮಾಜ.

**ಪ್ರಶ್ನೆ**. ಸಮಾಜಕ್ಕೂ ಮತ್ತು ಅಲ್ಲಿನ ಸದಸ್ಯರುಗಳಿಗೂ ಇರುವ ಸಂಬಂಧದ ಬಗ್ಗೆ ದಯಮಾಡಿ ತಿಳಿಸಿಕೊಡಿ.

**ಮಹರ್ಷಿಗಳು**. ಬೇರೆ ಬೇರೆ ವಿಧವಿಧವಾದ ಆಚರಣೆಗಳಲ್ಲಿ ನಿರತರಾಗಿರುವ ಸಮಾಜವು, ದೇಹ ಮತ್ತು ಅದರ ಸದಸ್ಯರುಗಳಾದ ಅಂಗಗಳಂತೆ ಇರುತ್ತದೆ.

ಯಾವ ರೀತಿ ಅಂಗಾಂಗಳು, ದೇಹವನ್ನು ಸೇವೆಮಾಡುತ್ತದೆಯೋ, ಅದೇರೀತಿ, ಸಮಾಜಕ್ಕೆ ಒಳ್ಳೆಯದನ್ನು ಮಾಡುತ್ತಾ, ಒಬ್ಬ ವ್ಯಕ್ತಿಯು ಏಳಿಗೆಯನ್ನು ಹೊಂದುತ್ತಾನೆ.

ಸಮಾಜದ ಆಸಕ್ತಿಗಳಿಗಾಗಿ ಯಾವಾಗಲೂ ಕಾಯಾ ವಾಚಾ ಮನಸಾ ನಡೆದುಕೊಳ್ಳಬೇಕು ಮತ್ತು ತನ್ನ ಗುಂಪಿನಲ್ಲಿರುವ ಇತರರನ್ನು ಇದೇ ರೀತಿ ಮಾಡುವಂತೆ ಪ್ರಚೋದಿಸಬೇಕು.

ಸಮಾಜದ ರಕ್ಷಣೆಗಾಗಿ ತಮ್ಮದೇ ಆದ, ಒಂದು ಗುಂಪನ್ನು ರಚಿಸಿಕೊಂಡು ಸಮಾಜವನ್ನು ಸರಿಪಡಿಸುವ ಮೂಲಕ, ಸಮಾಜದ ಏಳಿಗೆಗೆ ಶ್ರಮಿಸಬೇಕು.

**ಪ್ರಶ್ನೆ**. ಜ್ಞಾನಿಗಳಲ್ಲಿ ಕೆಲವರು ಶಕ್ತಿಯನ್ನು ಮತ್ತೆ ಕೆಲವರು ಶಾಂತಿಯನ್ನು ಪ್ರತಿಪಾದಿಸುತ್ತಾರೆ. ಇದರಲ್ಲಿ ಸಮಾಜದ ಏಳಿಗೆಗೆ ಯಾವುದು ಸಹಕಾರಿ ಆಗಬಲ್ಲದು?

**ಮಹರ್ಷಿಗಳು**. ತನ್ನ ತನ್ನ ಮನಸ್ಸನ್ನು ಶುದ್ಧಿಗೊಳಿಸಲು, ಶಾಂತಿಯನ್ನೂ ಮತ್ತು ಸಮಾಜದ ಒಳಿತಿಗೆ ಶಕ್ತಿಯನ್ನೂ ಉಪಯೋಗಿಸಬೇಕು. ಶಕ್ತಿಯಿಂದ ಸಮಾಜವನ್ನು ಕಟ್ಟಿದಾಗ ಶಾಂತಿಯು, ತಾನಾಗಿಯೇ ಸ್ಥಿರಗೊಳ್ಳುತ್ತದೆ.

**ಪ್ರಶ್ನೆ**. ಯಾವ ರೀತಿಯ ಉಚ್ಚ ಗುರಿಯನ್ನು ಸಮಾಜದಲ್ಲಿ ಇಟ್ಟುಕೊಂಡಿರುವುದು ಬಹಳ ಮುಖ್ಯ?

**ಮಹರ್ಷಿಗಳು**.. ಸಮಾಜ ಮತ್ತು ಸಮಸ್ಯೆಗಳನ್ನು ಗುರಿಯಾಗಿ ಇಟ್ಟುಕೊಂಡು, ಭ್ರಾತೃತ್ವ ಭಾವವನ್ನು, ಪೂರ್ಣ ಸಮಾಜದ ಉಳಿಕೆಗಾಗಿ ಶ್ರಮಪಡಬೇಕು. ಭ್ರಾತೃತ್ವ ಭಾವದಿಂದ ಉತ್ತಮವಾದ ಶಾಂತಿಯು ಭದ್ರವಾಗಿ ನೆಲೆ ನಿಲ್ಲುವುದು. ಆಗ, ಭೂಮಂಡಲವು ಒಂದೇ ಕುಟುಂಬ ಎನ್ನುವಂತೆ ಇರುವುದು.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಸಮಾಜ ಎನ್ನುವ ಹತ್ತನೆಯ ಅಧ್ಯಾಯ.

ಹನ್ನೊಂದನೆಯ ಅಧ್ಯಾಯ

# ಜ್ಞಾನ ಮತ್ತು ಸಿದ್ಧಿಯ ಹೋಲಿಕೆಗಳು.

**ಪ್ರಶ್ನೆ**. ಹೇ ಮುನಿಶ್ರೇಶ್ವರೆ, ಜ್ಞಾನ ಮತ್ತು ಸಿದ್ಧಿಗಳು ಒಂದಕ್ಕೊಂದು ಪೂರಕವೇ ಅಥವಾ ಅಲ್ಲವೇ?

**ಮಹರ್ಷಿಗಳು**. ಸಹಜ ಸ್ಥಿತಿಯಲ್ಲಿ ಸ್ಥಿರವಾಗಿ ನೆಲೆ ನಿಂತವನು, ಸಹಜವಾದ ತಪಸ್ಸನ್ನು ಅವನ ಸ್ವಭಾವದಿಂದಲೇ ದಿನದಿನವೂ ಮಾಡಬಲ್ಲವನು. ಅಂತಹ, ಸಹಜ ಸ್ಥಿತಿಯಲ್ಲಿ ಸೋಮಾರಿತನವೇ ಇರದು.

ಆತ್ಮನಲ್ಲಿ, ಅನಾಯಾಸವಾಗಿ ಶಾಂತವಾಗಿ ಇರಬಲ್ಲ ಸ್ಥಿತಿಯೇ ತಪಸ್ಸು. ಕ್ಷಣಕ್ಷಣಕ್ಕೂ ಉತ್ತಮವಾದ ಫಲವನ್ನು ನೀಡುವಂತಹ ಸ್ಥಿತಿಯೇ ಈ ತಪಸ್ಸು.

ಈ ರೀತಿ ಪಕ್ವತೆಯಿಂದ ಕೂಡಿದ ತಪಸ್ಸು ಸಿದ್ಧಿ, ಕಾಲಜ್ಞಾನಿಗಳಿಗೆ ಬರಬಹುದು ಮತ್ತು ಆ ದಾರಿಯಲ್ಲಿ ಪ್ರಾರಬ್ಧಗಳು ಇದ್ದಲ್ಲಿ ಜ್ಞಾನಿಯು ಕೂಡ ಅಂತಹ ಶಕ್ತಿಗಳನ್ನು ತೋರಿಸಬಹುದು.

ಯಾವ ರೀತಿ, ಋಷಿಯು, ಪ್ರಪಂಚವು ಆತ್ಮನ ಸ್ವರೂಪದ ತೋರಿಕೆಯೆಂದು ತಿಳಿಯುತ್ತಾನೆಯೋ, ಅದೇ ರೀತಿ ಸಿದ್ಧಿಗಳು ಕೂಡ ಆತ್ಮನ ತೋರಿಕೆಗಳೇ ಎಂದು ತಿಳಿಯುತ್ತಾನೆ.

ಪ್ರಾರಬ್ಧಗಳ ಅಡಚಣೆ ಇಲ್ಲದಿದ್ದರೆ, ಉನ್ನತವಾದ ಶಕ್ತಿಗಳನ್ನು ಹೊಂದಿದ್ದರೂ, ಜ್ಞಾನಿಯು ಅಲೆಗಳಿಲ್ಲದ ಸಮುದ್ರದಂತೆ ಅಲುಗಾಡದೆ ಸ್ಥಿರವಾಗಿ ಇರಬಲ್ಲವ.

ನಿಜ ಸ್ಥಿತಿಯಲ್ಲಿ ನಿಂತವ, ಬೇರೆ ಯಾವ ರೀತಿಯ ಶಕ್ತಿಗಳನ್ನು ಪಡೆಯಲೂ ಹವಣಿಸುವುದಿಲ್ಲ. ಆತ್ಮನಲ್ಲಿ ನಿಲ್ಲುವುದೇ ಎಲ್ಲಾಶಕ್ತಿಗಳ ಸಂಪೂರ್ಣ ಸ್ಥಿತಿ.
ಶ್ರಮಪಡದ ತಪಸ್ಸಿಗೆ ಸಹಜಸ್ಥಿತಿ ಎನ್ನುತ್ತಾರೆ. ಆ ಸ್ಥಿತಿಯಲ್ಲಿ ಪಕ್ವತೆ ಹೊಂದಿದಾಗ, ಶಕ್ತಿಗಳು ಏಳುತ್ತವೆ ಎಂಬುವುದು ನಂಬಿಕೆ.

ಈ ರೀತಿಯಾಗಿ ದೃಢವಾಗಿ ಆತ್ಮದಲ್ಲಿ ನಿಂತವ, ಬಹಳ ಜನರಿಂದ ಸುತ್ತುವರಿಯಲ್ಪಟ್ಟರೂ ಆಶ್ಚರ್ಯಕರವಾದ ತಪಸ್ಸಿನಲ್ಲಿ ಮುಳುಗಿರುತ್ತಾನೆ. ಅಂತಹವನಿಗೆ ಏಕಾಂತತೆಯ ಅಗತ್ಯವಿಲ್ಲ.
ಅರಿಯದ ಮೂಢರು,ಜ್ಞಾನದಲ್ಲಿ ಶಕ್ತಿಯಿಲ್ಲ, ಎಂದು ತಿಳಿದಿರುತ್ತಾರೆ. ತನ್ನ ಆತ್ಮ ಸ್ವರೂಪದಲ್ಲಿ ನಿಂತ ಜ್ಞಾನಿಯು ಪರಿಪೂರ್ಣತೆಯನ್ನು ಹೊಂದಿರುವಂತಹ ಶಕ್ತಿಯ ಒಂದು ಭಂಡಾರ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಜ್ಞಾನ ಮತ್ತು ಸಿದ್ಧಿ ಎಂಬ ಹನ್ನೊಂದನೆಯ ಅಧ್ಯಾಯ.

ಹನ್ನೆಡನೆಯ ಅಧ್ಯಾಯ

## ಶಕ್ತಿಯ ವಿವರಣೆ

**ಪ್ರಶ್ನೆ**. ಅಜ್ಞಾನಿಗಳು,ಮತ್ತು ಜ್ಞಾನಿಗಳು ನಿತ್ಯ ಜೀವನದಲ್ಲಿ... ನಾಮ, ರೂಪ, ಕ್ರಿಯಾ, ಕರ್ಮ ಕಾರ್ಯಕಲಾಪಗಳನ್ನು, ಯಾವರೀತಿಯಲ್ಲಿ ತಿಳಿಯುತ್ತಾರೆ ? ಯಾವ ರೀತಿಯಲ್ಲಿ, ಅಜ್ಞಾನಿಗಿಂತ ಜ್ಞಾನಿಯು, ಉನ್ನತ ಸ್ಥಿತಿಯಲ್ಲಿ ಇರುವವನು.?

**ಮಹರ್ಷಿಗಳು.** ಜ್ಞಾನಿಗಳಿಗೆ ಶ್ರವಣಗೋಚರ ಅಂದರೆ ಕೇಳಲ್ಪಡುವುದು. ಆತ್ಮನಿಂದ ಬೇರೆಯಾಗಿ ಇರುವುದಿಲ್ಲವೋ, ಅಂತಹವನಿಗೆ ದೃಶ್ಯವು ಅಂದರೆ ನೋಡಲ್ಪಟ್ಟ ವಸ್ತುವೂ, ಆತ್ಮನಿಗಿಂತ ಬೇರೆಯಾಗಿ ಇರುವುದಿಲ್ಲ.
ಜ್ಞಾನಿಗಳಿಗೆ, ಯಾವ ವಿಷಯಗಳು ಮತ್ತು ಆತ್ಮನು ಬೇರೆಯಾಗಿ ಕಾಣುವುದಿಲ್ಲವೊ ,ಅಂತಹವನಿಗೆ ವಸ್ತುಗಳು ಮತ್ತು ಅವುಗಳ ಗ್ರಹಿಕೆಕೂಡ, ಆತ್ಮನಿಗಿಂತ ಬೇರೆಯಾಗಿರುವುದಿಲ್ಲ.

ಬಂಧನಗಳ ಕಾರಣದಿಂದ, ಯಾವ,ಅಜ್ಞಾನಿಗಳಿಗೆ ವಿಷಯಗಳು (ನೋಟವು)ಮತ್ತು ಆತ್ಮನು ಬೇರೆಯಾಗಿ ಇರುತ್ತದೆಯೋ, ಅವರಿಗೆ, ವಸ್ತುಗಳು ಮತ್ತು ಅವುಗಳ ಗ್ರಹಿಕೆಯೂ ಬೇರೆ ಇರುವಂತೆ ಕಾಣುತ್ತದೆ.

ಈ ವ್ಯತ್ಯಾಸದ ನೋಟದಲ್ಲಿಯೇ ಜ್ಞಾನಿಯಾದರೋ ಅವಶ್ಯವಾದದ್ದು ಮಾತ್ರ ಗ್ರಹಿಸುತ್ತಾನೆ. ನೋಟದ ವ್ಯತ್ಯಾಸಗಳಲ್ಲಿ ಸಿಲುಕಿದ ಅಜ್ಞಾನಿಯು, ತನ್ನನ್ನು ಬೇರೆ ಎಂದು ತಿಳಿಯುತ್ತಾನೆ.

ಜ್ಞಾನಿಯು ಮೂಲಭೂತ ಅಸ್ತಿತ್ವವನ್ನು ಒಟ್ಟಾಗಿ ಜೋಡಿಸಿ ನೋಡುತ್ತಾನೆ. ಅಜ್ಞಾನಿಯು ಈ ವ್ಯತ್ಯಾಸವನ್ನು ಬಿಡಿಬಿಡಿಯಾಗಿ ನೋಡುವುದರಿಂದ, ಇವೆಲ್ಲವೂ ತನ್ನಿಂದ ಬೇರೆ ಎಂದು ತಿಳಿದು ಗೊಂದಲಕ್ಕೆ ಸಿಕ್ಕುತ್ತಾನೆ.

**ಪ್ರಶ್ನೆ**. ಈ ನಾಮ ರೂಪ ಮತ್ತು ನೋಟದಲ್ಲಿ ವ್ಯತ್ಯಾಸ ಕಂಡುಬರಲು, ಶಕ್ತಿಯು ಕಾರಣವೋ, ಅಥವಾ ಇವುಗಳು ಶಕ್ತಿ ರಹಿತವಾದವುಗಳೋ.?

**ಮಹರ್ಷಿಗಳು.** ಈ ಮೂರರಲ್ಲಿ ತೋರುವ ವ್ಯತ್ಯಾಸ ಯಾವುದರಿಂದ ಉಂಟಾಗುತ್ತದೆಯೋ ಅದೇ ಉನ್ನತ ಶಕ್ತಿಯಿಂದ ಕೂಡಿರುವುದು ಎಂದು ವೇದಾಂತವನ್ನು ತಿಳಿದವರು ಹೇಳುತ್ತಾರೆ.

**ಪ್ರಶ್ನೆ.** ವೇದಾಂತಗಳು ತಿಳಿಸುವ ಈ ದೈವಿಕ ಶಕ್ತಿಯೇ ಕ್ರಿಯಾತ್ಮಕವೋ ಅಥವಾ ಸ್ಥಿರವುಳ್ಳದ್ದೋ?

**ಮಹರ್ಷಿಗಳು.** ಈ ಶಕ್ತಿಯ ಚಲನದಿಂದಲೇ ಪ್ರಪಂಚವು ತೋರುವುದು. ಈದೈವಿಕ ಶಕ್ತಿಯು,, ನಿರ್ಗುಣ ,ನಿಷ್ಕ್ರಿಯ,ನಿಶ್ಚಲ, ಅಗೋಚರ ಅನಂತ ಶಕ್ತಿಯುತ ಅಸ್ಥಿತ್ವದ ಸ್ವರೂಪವು. ಅದು ಅಚಲವಾದದ್ದು. ಅದು ಸಕಲ ಕ್ರಿಯೆಗಳಿಗೆ... ಮೂಲವಾಗಿ... ಇರುವುದು. ಅಂದರೆ, ಈ ಶಕ್ತಿಯ ಮೂಲ ಸ್ವರೂಪವು ಎಂದೂ ಅಚಲ ವಾದದ್ದು.

ಈ ಅಚಲವಾಗಿ ಇರುವ ಇರುವಿಕೆಯ ಅರಿವಿನ ಬೆಳಕಿನ ಕಾಂತಿ ಕಿರಣ ಪ್ರತಿಬಿಂಬ ಪ್ರತಿಕ್ರಿಯೆಯೇ ತೋರಿಕೆಗೆ ಕಾರಣ.... ಅದನ್ನು....ವಿವರಿಸಲಾರದ... " ಮಾಯಾ " ಎನ್ನುವರು , ಜ್ಞಾನಿಗಳು, ಮತ್ತು ವೇದಾಂತ ಸಾರ ತಿಳಿದ ಪಂಡಿತರು.

ಪರತಂತ್ರವಶನಾದವನು,  ತನ್ನ ದೇಹ ಮತ್ತು ಕಾಣುವ ಜಗತ್ತು ಎರಡೂ ಬೇರೆ ಬೇರೆ ಎಂಬ ನಂಬಿಕೆಯಿಂದ, ಈ  ನಿಜ ಸ್ವರೂಪವನ್ನು ಅರಿಯದೆ ಇರುತ್ತಾನೆ..  ಒಂದು ಸರ್ವವ್ಯಾಪಿ ಅಗೋಚರ ಶಕ್ತಿಯಿಂದಲೇ ಇದೆಲ್ಲವೂ ನಮಗೆ ಕಾಣುತ್ತದೆ ಎಂಬ ತಿಳುವಳಿಕೆ ಇಲ್ಲದ ಕಾರಣ, ದೃಷ್ಟಿಯಲ್ಲಿ ಬೇಧ  ಉಂಟಾಗುತ್ತದೆ. .

ವಾಸ್ತವ ಸಂಗತಿ ಏನೆಂದರೆ, ಈ ಅಗೋಚರ  ಶಕ್ತಿಯೇ ( ಮಾಯಾಶಕ್ತಿ) ಸತ್ಯ ಸ್ವರೂಪ. ಇದು, ದೇಶ ಕಾಲ ಮತ್ತು ಕಾರ್ಯಗಳಿಗೆ,ಮೀರಿ ಇರುವಂತಹ ಒಂದು ಸತ್ ಸ್ವರೂಪ.
ಇದೇ ಅರಿವಿನ ಇರುವಿಕೆ ಅಥವಾ ಇರುವಿಕೆಯ ಅರಿವು

ಈಶ್ವರ ಮತ್ತು ಶಕ್ತಿಗಳ ತೋರಿಕೆಯ ವ್ಯತ್ಯಾಸವು ನಮ್ಮ ದ್ವೈತ ದೃಷ್ಟಿಯ ನೋಡುವಿಕೆಯೇ ಆಗಿದೆ. ಈ ರೀತಿಯಾದ ದೃಷ್ಟಿಯಿಂದ, ಹಿಂದೆ ಸರಿದಾಗ ಇವೆರಡೂ ಒಂದಾಗಿ ಗೋಚರಿಸುತ್ತದೆ.

**ಪ್ರಶ್ನೆ**.  ಹಾಗಾದರೆ ಈ ಬ್ರಹ್ಮಾಂಡದ ಚಟುವಟಿಕೆಗೆ ಕಾರಣನಾದ ಈಶ್ವರನು ಶಾಶ್ವತವೋ ಅಲ್ಲವೋ?  ದಯಮಾಡಿ ತಿಳಿಸಿ.

**ಮಹರ್ಷಿಗಳು**.  ಈಶ್ವರನು  ಚಲನರಹಿತನು...ಅನಂತನು, ,ಅಗೋಚರನು.. ಈಶ್ವರ ಸನ್ನಿಧಿಯಲ್ಲಿ ಎಲ್ಲಾ, ಅಗೋಚರ ಕಲ್ಪನೆಗಳು ಎಲ್ಲಾ ಅಗೋಚರ ಕಂಪನಗಳು ಉದ್ಭವಿಸುತ್ತದೆ. ಅಥವಾ ಸಂಭವಿಸುತ್ತದೆ.  ಚಲನ ರಹಿತವಾದ ಈ ಅತ್ಯುನ್ನತ ಶಕ್ತಿಯು ತನ್ನ ಸ್ವಂತ ಶಕ್ತಿಯಿಂದಲೇ ಚಲಿಸುತ್ತದೆಯಾದರೂ, ಅದು ವಾಸ್ತವಿಕವಾಗಿ ಸ್ಥಿರವಾಗಿದೆ.  ಈ ಆಳವಾದ ರಹಸ್ಯವನ್ನು ಋಷಿಗಳು ಮಾತ್ರ ತಿಳಿಯಬಲ್ಲರು.

ಚಲನೆಯೇ ಒಂದು ಚಟುವಟಿಕೆ. ಈ ಚಟುವಟಿಕೆಗೆ ಶಕ್ತಿ ಎನ್ನುತ್ತಾರೆ. ಪರಮಾತ್ಮನು ತನ್ನ ಶಕ್ತಿಯಿಂದಲೇ ನಮಗೆ ಗೋಚರಿಸುವ ಎಲ್ಲವನ್ನು ಸೃಷ್ಟಿ ಮಾಡಿದ್ದಾನೆ

ಈ ಚಟುವಟಿಕೆಗಳು ಎರಡು ವಿಧವಾಗಿ ಸ್ಪಷ್ಟವಾಗುತ್ತದೆ. ಒಂದು ಪ್ರವೃತ್ತಿ (ಸೃಷ್ಟಿ+ ಸ್ಥಿತಿ) ಮತ್ತೊಂದು ನಿವೃತ್ತಿ (ಪ್ರಳಯ). 'ಯಾವಾಗ ಎಲ್ಲವೂ 'ಆತ್ಮನೆಯಲ್ಲಿಯೇ ಲೀನವಾಗುವುದು' ಎಂಬ ವೇದ ವಾಕ್ಯ,(ಯದಾ ಸರ್ವಂ ಆತ್ಮನ ಸಂಭೂತಃ) ನಿವೃತ್ತಿಯನ್ನು ಸೂಚಿಸುತ್ತದೆ.

"ಸರ್ವಂ" ಎನ್ನುವುದು ದ್ವೈತ ದೃಷ್ಟಿಯಿಂದ ನೋಡುವ ಎಲ್ಲಾ ನೋಟಗಳು. "ಅಭೂತ್" ಎಂದಾಗ ಒಂದು ರೀತಿಯ ಚಟುವಟಿಕೆ ಎಂದರ್ಥ. ಇವೆಲ್ಲವೂ ತಾನೇ ಆಯಿತು ಎನ್ನುವ ಸಂದೇಶ.

ನಿರ್ದಿಷ್ಟ ಪದವಾದ "ಆತ್ಮನ" ಎಂದರೆ, ಆತನೇ 'ಸ್ವಯಂ' ಎಂದರ್ಥ. ಎಲ್ಲ ರೀತಿಯ ವೈವಿಧ್ಯಮಯ ವಸ್ತುಗಳು ಯಾರಿಂದ ಉತ್ಪತ್ತಿಯಾಗಿ ಇದೆಯೋ, ಅದೇ ಕಡೆಯಲ್ಲಿ, ಅವನಲ್ಲಿ /ಆತ್ಮನಲ್ಲಿ,)ಲಯವಾಗುತ್ತದೆ .

ಶಕ್ತಿ ಇಲ್ಲದಿದ್ದರೆ ಇರುವಿಕೆಯನ್ನು ಗ್ರಹಿಸಲು ಅಸಾಧ್ಯ. ಶಕ್ತಿಗೆ ಎರಡು ನಾಮಗಳಿವೆ.
೧. ವ್ಯಾಪಾರ/"ಚಟುವಟಿಕೆ" ೨. ಆಶ್ರಯ/ "ನೆಲೆ".

ವೇದಾಂತಿಗಳ ಮತ್ತು ಜ್ಞಾನಿಗಳ ಪ್ರಕಾರ, ಉತ್ಪತ್ತಿ, ಸ್ಥಿತಿ ಮತ್ತು ಲಯಗಳು ವ್ಯಾಪಾರ(ಚಟುವಟಿಕೆ), ಆಶ್ರಯ ಎಂದರೆ, ಮೂಲ ವಾಸಸ್ಥಾನ. ಇರುವಿಕೆ ಅಥವಾ ಅರಿವು ಅಲ್ಲದೆ ಬೇರೆ ಏನೂ ಅಲ್ಲ. ಇರುವಿಕೆಯೇ ಎಲ್ಲವೂ ಮತ್ತು ಅದು ಯಾವ ಆಧಾರಗಳ ಮೇಲೆಯೂ ನಿಂತಿಲ್ಲ. ಯಾರು ಚಟುವಟಿಕೆ ಮತ್ತು ಆಶ್ರಯ ಎರಡೂ ಶಕ್ತಿಯ

ರೂಪಗಳೇ ಎಂದು ತಿಳಿಯುತ್ತಾನೆಯೋ ಅಥವಾ ತಿಳಿಯಬಲ್ಲವನೋ, ಅವನೇ, ನಿಜವಾದ ಜ್ಞಾನಿ.

ಚಟುವಟಿಕೆ ಇಲ್ಲದಿದ್ದಲ್ಲಿ ಸತ್ ಸ್ವರೂಪಕ್ಕೆ ವೈವಿಧ್ಯತೆಯೇ ಕಂಡುಬರುವುದಿಲ್ಲ. ಸತ್ತಾ ಎಂಬುದು ಶಕ್ತಿಯಿಂದ ಬೇರೆಯೇ ಅಲ್ಲ. ಚಟುವಟಿಕೆಗಳು ಎಂದೂ ಎಳುವುದೇ ಇಲ್ಲ.

ಕಾಲಾಂತರದಲ್ಲಿ, ಈ ಪ್ರಪಂಚದಲ್ಲಿ ಪ್ರಳಯ ಸ್ಥಿತಿಯು ಉಂಟಾಗಬೇಕು. ಆಗ ಚಟುವಟಿಕೆಗಳು ಇರುವಿಕೆಯಲ್ಲಿ ಅಂದರೆ, ತನ್ನಲ್ಲಿಯೇ ವಿಲೀನಗೊಂಡು ಏನೂ ವ್ಯತ್ಯಾಸವೇ ತೋರದಂತೆ ಇರುತ್ತದೆ.

ಶಕ್ತಿಯವಿನಹ ಯಾವ ರೀತಿಯ ಉತ್ಪತ್ತಿಯಾಗಲೀ ಅಥವಾ ನಾಮ-ರೂಪಗಳ ಸಂವೇದನೆ ಇರುವುದು ಸಾಧ್ಯವೇ ಇಲ್ಲ.

ಸೃಷ್ಟಿಯ ಕಾರ್ಯದ ಕಾರಣ ಉತ್ಕೃಷ್ಟವಾದ ಈ ಶಕ್ತಿಯು ಎರಡು ನಾಮಗಳಿಂದ ಸೂಚಿಸಲ್ಪಡುತ್ತದೆ. ಒಂದು ಅಂತಸ್ಥ ಶಕ್ತಿ ಮತ್ತೊಂದು ನಿಷ್ಕ್ರಿಯ ಶಕ್ತಿ.
ಉತ್ತಮರಾದ ಮನುಷ್ಯರಲ್ಲಿ, ಯಾರು ಚಲನಶಕ್ತಿ ಇದ್ದಾಗಲೇ ಶಕ್ತಿ ತೋರುತ್ತದೆ ಎಂದು ನಂಬಿರುತ್ತಾರೆಯೋ, ಅಂತಹವರಿಗೆ, ಬೇರೆ ರೀತಿಯ ಚಲನರಹಿತ ಶಕ್ತಿಯ ನೆಲೆ ಒಂದು ಇದೆ, ಎಂದು, ತಿಳಿದವರು (ಅಚಲ ಸತ್ಯಸ್ವರೂಪದ ಅನುಭವಿಗಳು) ಸರಿಯಾಗಿ ಅರ್ಥಮಾಡಿಸಬೇಕು.

ಆ ರೀತಿಯಾದ ಏಕೈಕ ಸರ್ವೋಚ್ಚ ಸತ್ಯತೆಯನ್ನು, ಹಲವರು ಶಕ್ತಿ ಎಂದು ಪರಿಗಣಿಸುತ್ತಾರೆ. ಮತ್ತೆ ಕೆಲವರು 'ಬ್ರಹ್ಮನ್' ಎಂದೂ, ಮಗದೊಬ್ಬರು, ಒಬ್ಬ ವ್ಯಕ್ತಿ, ಎಂದೂ ತಿಳಿಯುವರು.

ಸತ್ಯವನ್ನು ಎರಡು ರೀತಿಯಲ್ಲಿ ಗ್ರಹಿಸಬಹುದು ಅದರ ಗುಣ ಲಕ್ಷಣಗಳಿಂದಲೂ ವಿವರಿಸಬಹುದು.  ಅಥವಾ ಅನುಭವದಲ್ಲಿ, ಅದರ ಸತ್ಯತೆಯನ್ನು ಗ್ರಹಿಸಬಹುದು.

ಇರುವಿಕೆಯ ಅರಿವನ್ನು, ಎರಡು ರೀತಿಯಲ್ಲಿ ಕಂಡುಕೊಳ್ಳಬಹುದು. ಅದರ ಕ್ರಿಯೆಯಿಂದಲೋ ಅಥವಾ ಅನುಭವದಿಂದಲೋ,ಅಂದರೆ ಪರೋಕ್ಷವಾಗಿ ಅದರ ಗುಣಲಕ್ಷಣಗಳಿಂದ ಅಥವಾ ಪ್ರತ್ಯಕ್ಷದಲ್ಲಿ ಅದರಲ್ಲಿ ಲೀನವಾದಾಗ ತಿಳಿಯಬಹುದು.

ಇರುವಿಕೆಯೇ ಬಚ್ಚ ಬರಿಯ ಅರಿವು.  ಕಾರ್ಯಶೀಲತೆಯೇ ಅದರ ಗುಣಲಕ್ಷಣಗಳು ಆದ್ದರಿಂದ ಕಾರ್ಯದ ಲಕ್ಷಣಗಳನ್ನು ಅನುಸರಿಸಿ ಅದರ ಅಸ್ತಿತ್ವವನ್ನು ಕಂಡುಕೊಂಡು ತಳಹದಿಯಲ್ಲಿ ಸ್ಥಿರವಾಗಿ ನಿಲ್ಲುವುದು ಮುಮುಕ್ಷುವಿನ ಗುರಿ ಆಗಬೇಕು.

ಇರುವಿಕೆಯು ಗುಣಲಕ್ಷಣಗಳಿಂದಲೇ ಕೂಡಿರುತ್ತದೆ.  ಅಸ್ತಿತ್ವದಲ್ಲಿ ಗುಣಲಕ್ಷಣಗಳು ಇರುತ್ತದೆ.  ಗುಣಗಳು ಇದ್ದಲ್ಲಿ ಅಸ್ತಿತ್ವವಿರುತ್ತದೆ. ಇವೆರಡರ ಸಂಬಂಧವೇ ಅದರ ಗುರುತು.

ನಿಜವಾಗಿ ನೋಡಿದಾಗ ಕಾರ್ಯಶೀಲತೆಯೇ ಇರುವಿಕೆ.  ಆದರೆ ಈ ವ್ಯತ್ಯಾಸದ ನೋಟ ಅಥವಾ ಜ್ಞಾನ, ಬರಿಯ ಊಹೆಯಷ್ಟೇ. ಚಟುವಟಿಕೆಯು, ಮೂಲ ತಳಹದಿ ಅಲ್ಲವೇ!  ಎಲ್ಲಾ ವ್ಯತ್ಯಾಸಗಳ ಜ್ಞಾನ, ಬರಿಯ ಊಹೆ ಮಾತ್ರ.

ಸೃಷ್ಟಿ ಎಂಬ ಶಕ್ತಿಯ ಆಟ, ಈಶ್ವರನ ಆಲೋಚನೆಯೇ ಹೊರತು, ಬೇರೆ ಏನೂ ಅಲ್ಲ.  ಈ ಯೋಚನೆಯನ್ನು ಮೀರಿ ನಿಂತಾಗಲೇ, ಅರಿವಿನ ತಳಹದಿ ಗೋಚರ ಆಗಬಲ್ಲದು.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ ಶಕ್ತಿಯ ವಿವರಣೆ ಎಂಬ ಹನ್ನೆರಡನೆಯ ಅಧ್ಯಾಯ.

ಹದಿಮೂರನೆಯ ಅಧ್ಯಾಯ.

# ಸನ್ಯಾಸಕ್ಕೆ ಸ್ತ್ರೀಯರ ಅರ್ಹತೆ.

**ಪ್ರಶ್ನೆ..೧.** ಆತ್ಮನಲ್ಲಿ ನಿರತಳಾಗಿರುವ ಸ್ತ್ರೀಯರಿಗೆ, ಮನೆ ಮಠವನ್ನು ತೊರೆದು ಸನ್ಯಾಸಿಗಳು ಆಗಬೇಕೆಂದು ಶಾಸ್ತ್ರಗಳಲ್ಲಿ ಹೇಳಿದೆಯೆ?

**ಪ್ರಶ್ನೆ ೨.** ಬದುಕಿರುವಾಗಲೇ ಒಬ್ಬ ಸ್ತ್ರೀಯು ಮುಕ್ತಿಯನ್ನು ಪಡೆದಿದ್ದರೆ ಅಂತಹವಳು, ದೇಹವನ್ನು ತ್ಯಜಿಸಿದರೆ, ಅವಳ ಶವ, ದಹನ ಕ್ರಿಯೆ ಆಗಬೇಕೊ ಅಥವಾ ಸಮಾಧಿ ಆಗಬೇಕೊ?

ಮಹರ್ಷಿಗಳು ಸತ್ಯದಲ್ಲಿ ನಿರಂತರವಾಗಿ, ನಿಂತ, ಮಹಿಳೆಯು, ಸನ್ಯಾಸಿ ಆಗಲೇಬೇಕೆಂದು, ಶಾಸ್ತ್ರಗಳಲ್ಲಿ ಯಾವ ರೀತಿಯ ಆದೇಶವು ಇಲ್ಲ. ಇದು ಖಂಡಿತ.

ಮುಕ್ತಿ ಅಥವಾ ಜ್ಞಾನದಲ್ಲಿ ಸ್ತ್ರೀಯರಿಗೂ ಪುರುಷರಿಗೂ ಏನೂ ವ್ಯತ್ಯಾಸವೇ ಇಲ್ಲ. ಜೀವಿತ ಕಾಲದಲ್ಲಿ ಬಿಡುಗಡೆ ಹೊಂದಿದಂತಹ ಸ್ತ್ರೀಯರ ದೇಹವನ್ನು ದಹನ ಮಾಡಬಾರದು. ಏಕೆಂದರೆ ಅದು ಒಂದು ದೇವಾಲಯದಂತೆ.

ಜೀವನ್ಮುಕ್ತನ ದೇಹದ ದಹನ ಕ್ರಿಯೆ ನಡೆಸಿದರೆ ಯಾವ ರೀತಿ ಅವನ ಪಾಪಗಳು ಅವನನ್ನು ಹಿಂಬಾಲಿಸುತ್ತದೆ ಎಂದು ಹೇಳುತ್ತಾರೆಯೋ,

ಅದೇ ರೀತಿ ಜೀವನ್ಮುಕ್ತ ಸ್ತ್ರೀಯ ದೇಹವನ್ನು ದಹನ ಮಾಡಿದರೆ ಅವಳ ಪಾಪಗಳು ಅವಳನ್ನು ಹಿಂಬಾಲಿಸುತ್ತದೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಸನ್ಯಾಸಕ್ಕೆ ಸ್ತ್ರೀಯರ ಅರ್ಹತೆ ಎಂಬ ಹದಿಮೂರರನೇ ಅಧ್ಯಾಯ.

ಹದಿನಾಲ್ಕನೆಯ ಅಧ್ಯಾಯ

# ಜೀವನ್ ಮುಕ್ತಿ.

**ಮಹರ್ಷಿಗಳು.** ಅರಿವಿನ ಇರುವಿಕೆಯಲ್ಲಿ, ಸ್ಥಿರವಾಗಿ ನೆಲೆಸಿರುವ ಒಂದು ನೆಲೆಗೆ, ಜೀವನ್ಮುಕ್ತಿ, ಎನ್ನುತ್ತಾರೆ. ಪ್ರಾಪಂಚಿಕ ಅಥವಾ ಶಾಸ್ತ್ರಗಳ ವಿಷಯಗಳು ಅವರಿಗೆ ಬಾಧಕ ಆಗಲಾರದು.

ಅತೀಂದ್ರಿಯ ಅರಿವು ಅಥವಾ ಪ್ರಜ್ಞಾನದಲ್ಲಿ ಯಾವ ರೀತಿಯ ವ್ಯತ್ಯಾಸವೂ ಇರುವುದಿಲ್ಲ. ಆದ್ದರಿಂದ, ಮುಕ್ತಿ ಎನ್ನುವುದು ಒಂದೇ ಬಗೆ. ಯಾವಾತನು, ಜೀವಿತಕಾಲದಲ್ಲಿ ಮುಕ್ತಿಯನ್ನು ಪಡೆಯುವನೋ, ಅವನು ಜೀವನ್ಮುಕ್ತ.

ಶಾಸ್ತ್ರಗಳ ಪ್ರಕಾರ, ಬ್ರಹ್ಮ ಲೋಕಕ್ಕೆ ತೆರಳಿ ಅಲ್ಲಿ ಮುಕ್ತಿಯ ಅನುಭವ ಪಡೆದವನಿಗೂ,, ಜೀವನ್ಮುಕ್ತನ ಅನುಭವಕ್ಕೂ ಯಾವ ವ್ಯತ್ಯಾಸವೂ ಇಲ್ಲ.

ಮೇಲೆ ತಿಳಿಸಿದ ಇಬ್ಬರ ಅನುಭವಗಳಿಗೂ ಮತ್ತು ಮಹಾತ್ಮರ ಮರಣ ಕಾಲದಲ್ಲಿ ಯಾವ ಪ್ರಾಣವು, ಆತ್ಮನಲ್ಲಿ ಲೀನವಾಗುವುದೋ, ಅಂತಹವರ ಅನುಭವಗಳು ಒಂದೇ ರೀತಿಯದಾಗಿ ಇರುತ್ತದೆ.
ಆತ್ಮನಲ್ಲಿ ನೆಲೆ ನಿಲ್ಲುವುದು ಎಲ್ಲರಿಗೂ ಒಂದೇ. ಆದ್ದರಿಂದ ಮುಕ್ತಿಯು ಒಂದೇ. ಇವೆಲ್ಲದರ ವ್ಯತ್ಯಾಸವುಮಾನವನ ಮನಸ್ಸಿನ

ಊಹಾಪೋಹಗಳು ಅಷ್ಟೇ . ಬೇರೆ ಏನೂ ಅಲ್ಲ. ಎಲ್ಲಾ ಅಹಂಕಾರಗಳ ಅನಿಸಿಕೆ ಅಷ್ಟೇ.
ಆತ್ಮನಲ್ಲಿ ನೆಲೆನಿಂತಿರುವ ಯಾವ ಮಹಾತ್ಮನು, ಜೀವಿತ ಕಾಲದಲ್ಲಿಯೇ ಮುಕ್ತಿಯನ್ನು ಪಡೆಯುತ್ತಾನೆಯೋ, ಅಂತಹವನ ಪ್ರಾಣ ಶಕ್ತಿಗಳು ಆತ್ಮನಲ್ಲಿ ಇಲ್ಲಿಯೇ ವಿಲೀನಗೊಳ್ಳುತ್ತದೆ.

ಕೆಲವು ಸಂದರ್ಭಗಳಲ್ಲಿ, ತಪಸ್ಸಿನ ಪಕ್ವತೆಯಿಂದ, ಜೀವನ್ಮುಕ್ತರಲ್ಲಿ ದೇಹವಿದ್ದರೂ ಸ್ಪರ್ಶ ಜ್ಞಾನ ಇಲ್ಲದೆ ಇರುವ ಸ್ಥಿತಿ ಇರುತ್ತದೆ.

ಮತ್ತಷ್ಟು ವಿಕಾಸವಾದಾಗ ದೇಹದ ಅದೃಶ್ಯತೆಯೂ ಏರ್ಪಡುತ್ತದೆ. ಅಂತಹ ಸಾಧುಗಳು , ಪೂರ್ಣ ಅರಿವೇ ಆಗಿ ಉಳಿದು, ತನ್ನ ಇಷ್ಟಬಂದಂತೆ ವಿಹರಿಸುತ್ತಿರುತ್ತಾನೆ.

ಈ ಎರಡೂ ದೇಹದ ಸಿದ್ಧಿಗಳು, ದೇವರ ಕೃಪೆಯಿಂದ,, ಬಹಳ ಬೇಗನೆ, ಸ್ವಲ್ಪಕಾಲದಲ್ಲಿಯೇ ಉಂಟಾಗ ಬಹುದು.

ಸಿದ್ಧಿಗಳಲ್ಲಿ ವ್ಯತ್ಯಾಸ ಎನ್ನುವುದು. ಇದ್ದರೂ,. ಮುಕ್ತಿಯಲ್ಲಿ ವ್ಯತ್ಯಾಸವು ಇರುವುದಿಲ್ಲ. ದೇಹ ವಿದ್ದರೂ ದೇಹ ಇಲ್ಲದಿದ್ದರೂ, ಯಾರು ಆತ್ಮನಲ್ಲಿ ನೆಲೆ ನಿಲ್ಲುತ್ತಾರೆಯೋ, ಅವರು ಮುಕ್ತರೇ.

ಸುಷುಮ್ನ ಮಾಡಿಯ ಮೂಲಕ ಅರ್ಚಿರಾದಿ ಮಾರ್ಗದಲ್ಲಿ, ಮೇಲಿನ ಲೋಕಗಳಿಗೆ, ಯಾರು ತೆರಳುತ್ತಾರೆಯೋ, ಅಂತಹವರು,ಅ ಲೋಕಗಳಲ್ಲಿ ದೊರೆತ ದೈವಕೃಪೆಯಿಂದ ಮುಕ್ತಿಯನ್ನು ಪಡೆಯುತ್ತಾರೆ.

ಬಹಳ ಪಕ್ವಗೊಂಡ ಪ್ರೀತಿಪಾತ್ರ ಭಕ್ತರಿಗೆ, ನಾಡಿಯ ಮೂಲಕ ಉತ್ತಮ ಲೋಕಗಳನ್ನು, ದೈವಕೃಪೆಯಿಂದ ಹೊಂದುತ್ತಾರೆ

ಅಂತಹವನು,ಎಲ್ಲ ಲೋಕಗಳಲ್ಲಿ ತನ್ನ ಇಚ್ಛೆಯಂತೆ ಸಂಚಾರ ಮಾಡಿ ಅನೇಕ ದೇಹಗಳನ್ನು ಹೊಂದಿ,ಬೇರೆಯವರಿಗೂ ತನ್ನ ಅನುಗ್ರಹವನ್ನು ದಯಪಾಲಿಸ ಬಹುದು..

ಕೆಲವರು,ಕೈಲಾಸ,ಮತ್ತೆ ಕೆಲವರು ವೈಕುಂಠ, ಮತ್ತೆ ಇತರರು ಸೂರ್ಯ ಲೋಕಗಳನ್ನು ಮುಕ್ತಿಧಾಮಗಳೆಂದು ಪರಿಗಣಿಸುವರು.

ಅಸಾಧಾರಣವಾದ ಶಕ್ತಿಯಿಂದ, ಭೂಲೋಕ ಮತ್ತು ಇತರ ಮುಕ್ತಿಧಾಮಗಳು, ಬಾಹ್ಯದಲ್ಲಿ ಅಸ್ತಿತ್ವವುಳ್ಳಂತೆ, ಆತ್ಮನಲ್ಲಿ, ಚಿತ್ರಗಳಂತೆ, ಪ್ರಕಟವಾಗುತ್ತದೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಜೀವನ್ ಮುಕ್ತಿ ಎಂಬ ಹದಿನಾಲ್ಕನೆಯ ಅಧ್ಯಾಯ.

ಹದಿನೈದನೆಯ ಅಧ್ಯಾಯ.

# ಶ್ರವಣ. ಮನನ ನಿಧಿಧ್ಯಾಸನ

**ಮಹರ್ಷಿಗಳು.** ಉಪದೇಶಕನಿಂದ, ವೇದಾಂತ ಶಾಸ್ತ್ರಗಳ ಅರ್ಥ ಮತ್ತು ಭಾಷ್ಯದ ವಿಸ್ತಾರವಾದ ಅರ್ಥವನ್ನು, ಕೇಳುವುದಕ್ಕೆ, ಶ್ರವಣ ಎಂದು ಕೆಲವರು ಹೇಳುತ್ತಾರೆ.

ಮತ್ತೆ ಕೆಲವರ ಪ್ರಕಾರ, ಆತ್ಮನ ಬಗ್ಗೆ, ತನ್ನದೇ ಆದ ಭಾಷೆಯಲ್ಲಿ ಆತ್ಮನ ಸ್ವಭಾವಗಳನ್ನು ವಿವರಿಸುತ್ತಿರುವ ಉಪನ್ಯಾಸಕನ ಭಾಷಣವೇ ಶ್ರವಣ.

ವೇದಾಂತದ ಶಾಸ್ತ್ರಗಳ ಕೇಳುವಿಕೆಯಿಂದ, ಗುರುಗಳ ಸ್ವಂತ ವಾಕ್ಯಗಳನ್ನು ಕೇಳಿದ ಮೇಲೆ ಅಥವಾ ಎರಡೂ ಇಲ್ಲದಿದ್ದಲ್ಲಿ, ಪೂರ್ವ ಜನ್ಮದ ಸಂಸ್ಕಾರಗಳಿಂದ ಮುಮುಕ್ಷತ್ವವನ್ನು ಪಡೆದವ, 'ನಾನು' ಎಂಬುದು, ಮನಸ್ಸು ಮತ್ತು ದೇಹಕ್ಕಿಂತ ಬೇರೆ ಬೇರೆ ಎಂದು ತಿಳಿಯುವುದೇ ನಿಜವಾದ ಶ್ರವಣ.

ಶಾಸ್ತ್ರಗಳ ಅರ್ಥಗಳ ಬಗ್ಗೆ ಕೂಲಂಕಷವಾಗಿ ವಿಚಾರ ಮಾಡುವುದು 'ಮನನ,' ಎಂದು ಕೆಲವರ ಮತ. ಆದರೆ ಆತ್ಮನ ಅಸ್ತಿತ್ವದ ಬಗ್ಗೆ ಚಿಂತಿಸುವುದೇ ನಿಜವಾದ ಮನನ.

ಬುದ್ಧಿಶಕ್ತಿಯಿಂದ ಬ್ರಹ್ಮನ ಮತ್ತು ಆತ್ಮನ ಬಗ್ಗೆ ಯಾವುದೇ ಅನುಮಾನ ಮತ್ತು ತಪ್ಪು ತಿಳುವಳಿಕೆ ಇಲ್ಲದ ನಿರ್ಣಯವೇ, ನಿಧಿಧ್ಯಾಸನ ಎಂದು ಕೆಲವರ ಮತ.

ಎಷ್ಟೇ ಸಂಶಯವಿಲ್ಲದ ಮತ್ತು ತಪ್ಪು ತಿಳುವಳಿಕೆಯಿಂದ ಅರಿತುಕೊಂಡ,ಎಷ್ಟೇ ತಪ್ಪು ತಿಳುವಳಿಕೆ ಇಲ್ಲದ, ಎಷ್ಟೇ ಅನುಮಾನ ರಹಿತವಾದ ಶಾಸ್ತ್ರಗಳಿಂದ ಕಲಿತರೂ , 'ಅರಿವಿನ ಇರುವಿಕೆಯ ಜ್ಞಾನ', ಆತ್ಮನ, ಅನುಭವವನ್ನು ಕೊಡಲಾರದು.

ಸಂಶಯ ಮತ್ತು ತಪ್ಪು ತಿಳುವಳಿಕೆಗಳನ್ನು ಸ್ವಂತ ಅನುಭವದಿಂದಲೇ ದೂರ ಮಾಡಬೇಕೇ ಹೊರತು, ಸಾವಿರಾರು ಶಾಸ್ತ್ರಗಳಿಂದ ತಿಳಿಯುವುದಲ್ಲ..

ಬಲವಾದ ನಂಬಿಕೆ ಇರುವವರಲ್ಲಿ,, ಶಾಸ್ತ್ರ ಪ್ರಮಾಣಗಳು,ಸಂಶಯಗಳನ್ನು ನಿವಾರಿಸಲು ಸಹಾಯಕಾರಿ ಆಗಬಹುದು. ಆದರೆ ಯಾವಾಗ ಈ ನಂಬಿಕೆಯಲ್ಲಿ ಚ್ಯುತಿ ಬರುವುದೋ, ಆಗ ಈ ಸಂಶಯಗಳು ಮತ್ತೆ ತಲೆದೋರುತ್ತವೆ.

ಇರುವಿಕೆಯ ಅಸ್ಥಿತ್ವದ ಅರಿವು ತನ್ನ ಸ್ವಂತ ಅನುಭವ ಮಾತ್ರದಿಂದಲೇ ತಿಳಿಯತಕ್ಕದ್ದು., ಇದರಿಂದ ಎಲ್ಲ ರೀತಿಯ ಗೊಂದಲಗಳ ನಿವಾರಣೆ, ಒಮ್ಮೆಯೇ, ಆಗಬಲ್ಲದು. ಆದ್ದರಿಂದ, ಆತ್ಮನಲ್ಲಿ ಪರಿಪೂರ್ಣವಾಗಿ ನಿಲ್ಲುವಿಕೆಯೇ ನಿದಿಧ್ಯಾಸನ.

ಆತ್ಮನಲ್ಲಿ ನೆಲೆಯಾಗದ, ಮನುಷ್ಯರ ಮನಸ್ಸಿನಲ್ಲಿ,, ಹೊರಗಿನ ಪ್ರಪಂಚವು ಸುಳಿದಾಡುತ್ತಲೇ ಇರುತ್ತದೆ. ಅಂತಹವರಿಗೆ ಶಾಸ್ತ್ರ ವಾಕ್ಯಗಳು ಮತ್ತು ಅದರ ಓದುವಿಕೆ, ನೇರವಾದ ಜ್ಞಾನವನ್ನು ಕೊಡಲಾರದು.

ಆತ್ಮನ ಅರಿವಿನ ನಿಷ್ಟೆಯು, ಯಾವಾಗ ಸ್ವಾಭಾವಿಕವಾಗುವುದೋ ಅದೇ ಪರಿಪೂರ್ಣ ಸ್ವಾತಂತ್ರ್ಯ ಮತ್ತು ಉತ್ಕೃಷ್ಟವಾದ ಸ್ಥಿತಿ. ಇದನ್ನು ನೇರವಾದ ಸಾಕ್ಷಾತ್ಕಾರ ಎನ್ನುವರು.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಶ್ರವಣ ಮನನ ನಿಧಿಧ್ಯಾಸನ ಎಂಬ ಹದಿನೈದನೆಯ ಅಧ್ಯಾಯ .

……………………………………..

ಹದಿನಾರನೆಯ ಅಧ್ಯಾಯ

# ಭಕ್ತಿ ಮತ್ತು ಅದರ ವಿಶೇಷತೆ

**ಮಹರ್ಷಿಗಳು.** ಆತ್ಮನು ಎಲ್ಲರಿಗೂ ಪ್ರಿಯವಾದವನು. ಆತನಲ್ಲದೆ ಮತ್ತೆ ಯಾರೂ ಹಿತಕರ ವಾಗಲಾರರು. ತುಪ್ಪದ ಧಾರೆಯಂತೆ ಇರುವ ಪ್ರೇಮವನ್ನು, 'ಭಕ್ತಿ' ಎನ್ನುತ್ತಾರೆ.

ದೇವರು ಎನ್ನುವವ, ತನ್ನ ಸ್ವಂತ 'ಆತ್ಮವೇ ಅವನು' ಎಂದು ತಿಳಿಯುವುದು ಪ್ರೇಮದಿಂದ ಮಾತ್ರವೇ. ಒಂದು ವೇಳೆ ನಾನು ದೇವರಿಗಿಂತ ಬೇರೆ ಎಂದು ತಿಳಿಯುತ್ತಿದ್ದರೂ, ಅವನು ತನ್ನ ಆತ್ಮನಲ್ಲಿಯೇ ನೆಲೆ ನಿಂತಿರುತ್ತಾನೆ ಮತ್ತು ಅವನಲ್ಲಿ ಲೀನವಾಗುತ್ತಾನೆ.

ಪರಮಾತ್ಮನ ಕಡೆ, ನಿರಂತರವಾಗಿ ತುಪ್ಪದ ಧಾರೆಯಂತೆ ಹರಿಯುವ ಪ್ರೇಮವೇ ಮನಸ್ಸಿನ ದುಗುಡಗಳನ್ನು ನಾಶಮಾಡಿ ಶುದ್ಧವಾಗಿರುವಂತೆ ಮಾಡುವುದು. ತನಗೆ ಬೇಡದಿದ್ದರೂ, ಅಥವಾ ಬಯಸದಿದ್ದರೂ ಸಿಗುವಂತಹ ಒಂದು ನೆಲೆ.

ಸರ್ವಾಂತರ್ಯಾಮಿಯಾದ ಪರಮಾತ್ಮನನ್ನು ಒಂದು ಮೂರ್ತಿಯಾಗಿ ಪರಿಗಣಿಸಿ, ಪೂಜಿಸುವಂತಹ ಸಾಮಾನ್ಯ ಮನುಷ್ಯನು, ಕಡೆಯಲ್ಲಿ ಎಲ್ಲಾ ವಿಧವಾದ ನಾಮ ರೂಪಗಳನ್ನೂ ದಾಟುತ್ತಾನೆ.

ದೇವತೆಗಳಿಗೆ ನಾಮರೂಪಗಳನ್ನು ಲಕ್ಷಣಗಳಾಗಿ ಹೊಂದಿಸಿದರರೂ, ಅದೇ ನಾಮ ರೂಪಗಳಿಂದ, ಬೇರೆ ಎಲ್ಲ ನಾಮ ರೂಪಗಳನ್ನು ದಾಟಿ ನಿಲ್ಲುತ್ತಾನೆ.

ಯಾವಾಗ, ಭಕ್ತಿಯು ಪರಿಪೂರ್ಣತೆಯಿಂದ ಇರುವುದೊ, ಆಗ, ಒಂದು ಶ್ರವಣದಿಂದಲೇ, ಪೂರ್ಣ ಜ್ಞಾನವನ್ನು ಹೊಂದಬಹುದು..

ನಿರಂತರವಾಗಿ ಹರಿಯುವ ನದಿಯಂತೆ ಇರದ, ಭಕ್ತಿಯನ್ನು, ತಡೆ ಇರುವ ಭಕ್ತಿ,, ಎಂದು ಕರೆಯುತ್ತಾರೆ ಇದು ಕೂಡ ಉತ್ಕೃಷ್ಟ ಭಕ್ತಿಯಲ್ಲಿ ಕೊನೆಗೊಳ್ಳುತ್ತದೆ.

ಒಂದು ಬಯಕೆಯನ್ನು ಇಟ್ಟುಕೊಂಡು ಭಕ್ತಿ ಮಾಡುವವನಿಗೆ, ಆ ಗುರಿ, ನೆರವೇರಿದರೂ, ತೃಪ್ತಿ ಉಂಟಾಗದೆ, ಮತ್ತೆ ಮತ್ತೆ ನಿರಂತರ ಸುಖಕ್ಕೆ, ದೇವರಲ್ಲಿ ಮೊರೆ ಹೋಗುತ್ತಲೇ  ಇರುತ್ತಾನೆ.

ಆಸೆಗಳಿಗೋಸ್ಕರ, ಮಾಡಿದ ಭಕ್ತಿಯು, ಆ ಆಸೆಗೆ ತೃಪ್ತಿಯನ್ನು ಕೊಡದಿದ್ದರೂ, ಪರಮಾತ್ಮನಲ್ಲಿ ಪೂರ್ಣ ನಂಬಿಕೆ ಇರುವ ಅಂತಹವನಿಗೆ ಆ ಭಕ್ತಿಯ,ಹೆಚ್ಚುತ್ತಾ ಹೋಗುತ್ತದೆ.

ಈ ರೀತಿಯಾದ ಸಂಪೂರ್ಣ ಪರಿಪೂರ್ಣ ಉತ್ಕೃಷ್ಟ ಭಕ್ತಿಯಿಂದಲೋ, ಅಥವಾ ಜ್ಞಾನದಿಂದಲೋ, ಸಂಸಾರ ಸಾಗರವನ್ನು ದಾಟಬಹುದಾಗಿದೆ.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
'ಭಕ್ತಿಯ ಮಹತ್ವ' ಎಂಬ ಹದಿನಾರನೆಯ ಅಧ್ಯಾಯ.

ಹದಿನೇಳನೆಯ ಅಧ್ಯಾಯ

# ಜ್ಞಾನದ ಸಾಧನೆ.

**ಪ್ರಶ್ನೆ**. ಜ್ಞಾನವು ಕ್ರಮಕ್ರಮವಾಗಿ ಸ್ವಲ್ಪಸ್ವಲ್ಪವಾಗಿ ಬರುವಂತಹ ನೆಲೆಯೋ ಅಥವಾ ಸೂರ್ಯನ ಪ್ರಭೆಯಂತೆ, ಒಂದೇ ಕ್ಷಣದಲ್ಲಿ ದೊರಕುವಂತಹದ್ದೋ?

**ಮಹರ್ಷಿಗಳು**. ಜ್ಞಾನವು ಎಂದೂ ಮುಕ್ಕು ಮುಕ್ಕಾಗಿ ಬರುವಂತಹದ್ದಲ್ಲ. ಯಾವಾಗ ಅಭ್ಯಾಸವು,ಪರಿಪೂರ್ಣತೆಯನ್ನು ಹೊಂದುವುದೋ, ಆಗ ಅದು ಧಗಧಗಿಸುವ ಜ್ವಾಲೆಯಂತೆ, ಒಮ್ಮೆಲೆ ತೋರಿಕೊಳ್ಳುವುದು.

**ಪ್ರಶ್ನೆ**. ಧ್ಯಾನದ ಅಭ್ಯಾಸದಲ್ಲಿ ಮನಸ್ಸು ಒಳಗೆ ಹೊರಗೆ ಬಂದು ಹೋಗುತ್ತಿರುತ್ತದೆ. ಒಳಮನಸ್ಕರಾದಾಗ, ಅದನ್ನು ಜ್ಞಾನ ಎನ್ನುತ್ತಾರೆಯೇ?

**ಮಹರ್ಷಿಗಳು**. ಮನಸ್ಸಿನ ಏರಿಳಿತಗಳು ಬರಿಯ ಅಭ್ಯಾಸದ ಒಂದು ಅಂಶವೇ ಹೊರತು ನಿಜವಾದ ಜ್ಞಾನ ಎಂದೂ ಜಾರದೆ. ಇರುವಂತಹದ್ದು.

**ಪ್ರಶ್ನೆ**. ಋಷಿಮುನಿಗಳು, ಶಾಸ್ತ್ರಗಳಲ್ಲಿ ಹೇಳಿದಂತೆ ಜ್ಞಾನಾರ್ಜನೆಗೆ ಹಲವಾರು ಮೆಟ್ಟಲುಗಳನ್ನು ಸೂಚಿಸಿರುವರಲ್ಲಾ? ಇವುಗಳನ್ನು ಯಾವ ರೀತಿಯಲ್ಲಿ ಸಮನ್ವಯ ಗೊಳಿಸಬೇಕು?

**ಮಹರ್ಷಿಗಳು**. ಬೇರೆಯವರ ಮನಸ್ಸಿನಲ್ಲಿ, ಶಾಸ್ತ್ರಗಳಿಂದ ತಿಳಿಸಿದ, ಎಲ್ಲ ರೀತಿಯ ಮೆಟ್ಟಿಲುಗಳ ಹಂತಗಳು, ಮುಕ್ತಿಯಲ್ಲಿ ವೈವಿದ್ಯಮಯ ಇರುವಂತೆ ಕಾಣಬಹುದು. ಆದರೆ ತಿಳಿದವರಿಗೆ ಜ್ಞಾನ, ಒಂದೇ. ಎರಡು ಮೂರುಗಳಲ್ಲ..

ಇಂದ್ರಿಯ ಮನಸ್ಸುಗಳ ಪ್ರಾರಬ್ಧದಿಂದ,ಜ್ಞಾನಿಯ ದೇಹದ ಆಚರಣೆಗಳಲ್ಲಿ ಇತರರಿಗೆ, ಹಂತಗಳಂತೆ ಕಂಡರೂ, ಜ್ಞಾನದಲ್ಲಿ ಹಂತಗಳು ಇಲ್ಲವೇ ಇಲ್ಲ.

**ಪ್ರಶ್ನೆ**. ಎಲ್ಲ ರೀತಿಯ ಅಜ್ಞಾನವನ್ನು ತೊಡೆದುಹಾಕಿದ ಆತ್ಮಜ್ಞಾನದ ಅರಿವು ಆದಮೇಲೆ, ಎಂದಾದರೂ ಅದು ಮತ್ತೆ ಅಜ್ಞಾನದಿಂದ ಹುಟ್ಟಿ, ಮರೆಯಲು ಸಾಧ್ಯವೇ?

**ಮಹರ್ಷಿಗಳು**. ಅಜ್ಞಾನಕ್ಕೆ ವಿರುದ್ಧವಾದ ಜ್ಞಾನವು ಒಂದಾವರ್ತಿ ಆದ ಬಳಿಕ, ಎಂದಿಗೂ ಅದನ್ನು ಮೀರಲು ಸಾಧ್ಯವಾಗಲಾರದು.

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ಮ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ.
ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಜ್ಞಾನ ಸಾಧನೆ ಎಂಬ ಹದಿನೇಳನೆಯ ಅಧ್ಯಾಯ.

ಹದಿನೆಂಟನೆಯ ಅಧ್ಯಾಯ

# ಸಿದ್ಧರುಗಳ ವೈಭವ.

ಅತ್ಯುತ್ತಮ ಗುಣಗಳುಳ್ಳ ಭಗವಾನ್ ರಮಣರಲ್ಲಿ,, ಸಿದ್ದರ ವೈಭವದ ಬಗ್ಗೆ ತಿಳಿಸಬೇಕೆಂದು ಅಮೃತನಾದ ಯತೀಂದ್ರರು ಪ್ರಾರ್ಥನೆ ಮಾಡಿದರು.

ಅವರಿಗೆ,ರಮಣರ ಸಂದೇಶ ಈ ರೀತಿ ಇತ್ತು,

**ಸಾಧುಗಳ ವೈಭವವನ್ನು ವರ್ಣಿಸಲು ಊಹೆಯೇ ಮಾಡಬಾರದು, ಏಕೆಂದರೆ ಅವರು ಶಿವನಿಗೆ ಸಮಾನರು. ನಿಜದಲ್ಲಿ ಹೇಳಬೇಕಾದರೆ ಅವರೆಲ್ಲರೂ ಶಿವಸ್ವರೂಪರೇ. ಎಲ್ಲ ರೀತಿಯ ಪ್ರಾರ್ಥನೆಗಳನ್ನು ಈಡೇರಿಸುವಂತಹ ಶಕ್ತಿಯನ್ನು ಹೊಂದಿರುವವರು.**

ಇಲ್ಲಿಗೆ. ಶ್ರೀ ರಮಣ ಗೀತೆ ಎಂಬ ಉಪನಿಷತ್ ಸಾರವಾದ ಬ್ರಹ್ನ ವಿದ್ಯೆಯ ಯೋಗ ಶಾಸ್ತ್ರದ. ಶ್ರೀ ರಮಣರ ಮತ್ತು ಶಿಷ್ಯರ. ಸಂವಾದದ. ಕಾವ್ಯ ಕಂಠ ವಸಿಷ್ಠ ಗಣಪತಿ ಮುನಿಗಳಿಂದ ರಚಿತವಾದ
ಸಿದ್ಧರ ವೈಭವ ಎಂಬ ಹದಿನೆಂಟನೆಯ ಅಧ್ಯಾಯ.

# ಅನುಬಂಧ ೧ ಮಂತ್ರದ ನಿರೂಪಣೆ.

ತಂತ್ರ ಶಾಸ್ತ್ರಗಳ ಪರಂಪರೆಯಲ್ಲಿ ಮಂತ್ರಗಳ ನಿರೂಪಣೆ ಕೆಳಕಂಡಂತೆ ಇರುತ್ತದೆ.

ಮಹರ್ಷಿಗಳು ಕರುಣಿಸಿದ ಮಂತ್ರ.      **ಓಂ ವಾಚದ್ಭಬೇ ನಮಃ**

ಓಂ ಎನ್ನುವುದು ವೇದಗಳ ಆದಿಯಲ್ಲಿ ಕಂಡ ಪ್ರಣವನಾದ.
*ವ* ಎನ್ನುವುದು ಲ ಕಾರದ ನಂತರ ಬರುವ ಅಕ್ಷರ.  ಪಾಕ ಎಂಬ ರಾಕ್ಷಸನನ್ನು ದಮನ ಮಾಡಿದ ಇಂದ್ರನನ್ನು ಸೂಚಿಸುವ ಅಕ್ಷರ ಲ. "ವ*ಎನ್ನುವುದು ಲ ನಂತರ ಬರುವ ಅಕ್ಷರ.
ಆನೆಗಳ ರಾಜ ಕಚ್ಚಪೇಶ ಎಂಬ ಹೆಸರುಳ್ಳ ರುದ್ರನ ಬೀಜಾಕ್ಷರ "ಚ*.
ಈ ಬೀಜಾಕ್ಷರಗಳು ಓಂ. ವ. ಚ.
ಧರಾಧರ  ಪರ್ವತದ ಬೀಜಾಕ್ಷರ *ದ*
ಗಾಢನಿದ್ರೆಯಲ್ಲಿ ಶಕ್ತಿಯನ್ನು ಸೂಚಿಸುವ ಬೀಜಾಕ್ಷರ  *ಭ*.
ಅಮರರ ರಾಜನಾದ ಅಮರೇಶ್ವರ ಎಂಬ ನಾಮಾಂಕಿತ  ರುದ್ರನ ಬೀಜಾಕ್ಷರ   *ಎ*
ಇವೆಲ್ಲವನ್ನು ಸೇರಿಸಿದಾಗ ಬರುವ ಸೂಕ್ಷ್ಮ ಅರ್ಥ ಶಕ್ತಿ ಸಂಕೇತ. *ಏ*.
ಯಕ್ ಎಂಬುದು ಅಮೃತ ಜೋಡಣೆಗೆ  ವ ಅಂದರೆ  *ವೇ*.
ನಮಃ  ಎಂದರೆ ನಮಸ್ಕಾರದ ಅರ್ಪಣೆ.
ಎಲ್ಲ ಬೀಜಾಕ್ಷರಗಳನ್ನು ಒಟ್ಟು ಕೂಡಿಸಿದಾಗ ಬರುವ ಮಂತ್ರ- **ಓಂ ವಾಚಾದ್ಭವೆ ನಮಃ.**

ಇದು ಜ್ಞಾನಿಗಳಿಗೆ ಮಾತ್ರ ತಿಳಿದಿರುವಂತಹ ರಹಸ್ಯ ಮಂತ್ರ.

ಈ ಮಂತ್ರದ ದೇವತೆ ಯಾರು?
ಅಗ್ನಿಯಿಂದ ಜನಿಸಿದ ಸುಬ್ರಹ್ಮಣ್ಯ?
ಹೇಗೆ?
ಓಂ ಕಾರ, ಶ್ರೇಷ್ಟವಾದ ಬ್ರಹ್ಮವು.
ವಾಚದ್ಭ ಎಂಬ ಪದದ ಉತ್ಪತ್ತಿ ಸ್ಥಾನದಿಂದ ಅಗ್ನಿಯು ಮೊದಲು ಪ್ರಕಟವಾಯಿತು. ಅದು ಶಬ್ದ ಮತ್ತು ಪದವಾಗಿ, ಬಾಯಿಯನ್ನು ಪ್ರವೇಶಿಸಿತು ಎಂದು ಶಾಸ್ತ್ರ ಗ್ರಂಥಗಳು ತಿಳಿಸುತ್ತವೆ.

ಆದ್ದರಿಂದ, ಮಾತನಾಡುವ ಈ ಶಕ್ತಿಯ ದೇವತೆ, ಅಗ್ನಿಯಿಂದ ಹುಟ್ಟಿದ ಕಾರ್ತಿಕೇಯ/ ಕುಮಾರ/ ಸುಬ್ರಹ್ಮಣ್ಯ.

ಈ ಅಗ್ನಿಯು ಪ್ರಕೃತಿ ರೂಪದ್ದಲ್ಲ.
ವಚಟ್ ಎಂಬುದು, ಅಗ್ನಿಯನ್ನು ಸೂಚಿಸುತ್ತದೆ.
ವಚಟ್ ಎಂಬ ಪದದಿಂದ ಹೊರಟ ಮಾತಿನಿಂದ ಬಂದ ತೇಜಸ್ಸು - ಅಗ್ನಿ

ಇದನ್ನು ಆಧಾರವಾಗಿ ಇಟ್ಟು ನೋಡಿದಾಗ ಈ ಮಂತ್ರದ ದೇವತೆಯೇ ಶ್ರೀ ರಮಣ ಮಹರ್ಷಿಗಳು.

ಈ ರಹಸ್ಯ ಮಂತ್ರವನ್ನು ಪ್ರಕಟಗೊಳಿಸಿದ ರಮಣ ಮಹರ್ಷಿಗಳಿಗೆ ಸಾಷ್ಟಾಂಗ ಪ್ರಣಾಮಗಳು.

# ಅನುಬಂಧ ೨ ಪ್ರಶ್ನೆ ಕೇಳಿದ ಶಿಷ್ಯರ ಹೆಸರುಗಳು

ಅಧ್ಯಾಯ.1. ಗಣಪತಿ ಮುನಿ. 29.12.1913
ಅಧ್ಯಾಯ-2.ಚಾತುರ್ಮಾಸ್ಯ. 1915
ಅಧ್ಯಾಯ-3. ದೈವ ವೃತ.
ಅಧ್ಯಾಯ-4. ದೈವ ವೃತ
ಅಧ್ಯಾಯ-5. ಆಗಸ್ಟ್ 9. 1917
ಅಧ್ಯಾಯ-6. ಆಗಸ್ಟ್ 9.1917
ಅಧ್ಯಾಯ-7.ಕರ್ಷಿಣಿಭಾರದ್ವಾಜಿ.
ಅಧ್ಯಾಯ-8.ಕರ್ಷಿಣಿ ಭಾರದ್ವಾಜಿ
ಅಧ್ಯಾಯ-9..ಗಣಪತಿ ಮುನಿ 14.8.1917
ಅಧ್ಯಾಯ-10.ಯೋಗನಾಥಯತಿ 15.8.1917
ಅಧ್ಯಾಯ-11.ಗಣಪತಿ ಮುನಿ 16.8.1917
ಅಧ್ಯಾಯ-12.ಭಾರದ್ವಾಜಕಪಾಲಿ. 19=8=1917
ಅಧ್ಯಾಯ-13. ಗಣಪತಿ ಮುನಿ.
ಅಧ್ಯಾಯ-14.ಭಾರದ್ವಾಜವೈದರ್ಭ. 20.81917
ಅಧ್ಯಾಯ-15. ಗಣಪತಿ ಮುನಿ 22.8.1917
ಅಧ್ಯಾಯ-16. ಗಣಪತಿ ಮುನಿ. 22.8.1917
ಅಧ್ಯಾಯ-17.ವೈದರ್ಭ. 25.8.1917
ಅಧ್ಯಾಯ-18.ಅಮೃತನಾಥ ಯತೀಂದ್ರ.